# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ಸಂಪುಟ ೬೯ / ಸಂಚಿಕೆ ೨

ಡಿಸೆಂಬರ್ ೧೯೮೪





ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ ಚಾಮರಾಜಪೇಟೆ ಬೆಂಗಳೂರು ೫೬೦೦೧೮

## ವಿನಿಮಯಕ್ಕೆ ಬಂದ ಪತ್ರಿಕೆಗಳು

**ದಿನಪತ್ರಿಕೆಗಳು :** (೧) ಉದಯವಾಣಿ, ಮಣಿಪಾಲ (೨) ರಾಷ್ಟ್ರಬಂಧು, ವಿರಾಜಪೇಟೆ (೩) ನವೋದಯ, ಗದಗ–ಬೆಟಗೇರಿ (೪) ಲೋಕದರ್ಶನ, ಬೆಳಗಾವಿ (೫) ವಿಜಯವಾಣಿ, ತುಮಕೂರು (೬) ಮೈಸೂರುಪ್ರಭ, ಮೈಸೂರು (೭) ನಾಡೋಜ, ಬೆಳಗಾವಿ (೮) ಕೋಲಾರವಾಣಿ, ಕೋಲಾರ (೯) ಕೋಲಾರಪತ್ರಿಕೆ, ಕೋಲಾರ (೧೦) ನೇತಾಜಿ, ಹುಬ್ಬಳ್ಳಿ (೧೧) ದಾವಣಗೆರೆಟೈಮ್ಸ್, ದಾವಣಗೆರೆ (೧೨) ಬಯಲುಸೀಮೆ, ಚನ್ನಪಟ್ಟಣ (೧೩) ಹೊಸಪೇಟೆ ಟೈಮ್ಸ್, ಹೊಸಪೇಟೆ (೧೪) ಸಂಯುಕ್ತ ಭಾರತ, ಬೆಂಗಳೂರು. (೧೫) ಕ್ರಾಂತಿದೂತ, ದಾವಣಗೆರೆ (೧೬) ನಹಧ್ವನಿ, ಮೈಸೂರು

**ವಾರಪತ್ರಿಕೆಗಳು :** (೧) ಕರ್ನಾಟಕವೈಭವ, ವಿಜಾಪುರ (೨) ಕಾನಡಾ ವೃತ್ತ, ಕುಮಟ (೩) ಕೈಫಿಯಾತ್ (ಹಿಂದಿ), ಬೆಳಗಾವಿ (೪) ಜನಜೀವಾಳ, ಬೆಳಗಾವಿ (೫) ಪ್ರಪಂಚ, ಹುಬ್ಬಳ್ಳಿ (೬) ಬೆಳಕು, ಮೈಸೂರು (೭) ರಾಯಭಾರಿ, ಉಡುಪಿ (೮) ವಿಶ್ವಕಲ್ಯಾಣ, ಯಾದಗಿರಿ (೯) ವಿಕ್ರಮ, ಬೆಂಗಳೂರು (೧೦) ಶರಾವತಿ, ಶಿವಮೊಗ್ಗ (೧೧) ಸಂದರ್ಶನ, ಬಿಜಾಪುರ (೧೨) ಸಂತವಾಣಿ, ಬನಹಟ್ಟಿ (೧೩) ಸಿರಸಿಸಮಾಚಾರ, ಸಿರಸಿ (೧೪) ಸಹಕಾರ, ಬೆಂಗಳೂರು (೧೫) ಸೋವಿಯತ್ ಒಕ್ಕೂಟದ ಸಮಾಚಾರ-ವಿಚಾರ, ಮದರಾಸು (೧೬) ಅರ್ಥ ವಿಕಾಸ, ಹುಬ್ಬಳ್ಳಿ (೧೭) ಕೆಂಬಾವುಟ, ಬೆಂಗಳೂರು (೧೮) ರಾಷ್ಟ್ರಮತ, ವಿರಾಜಪೇಟೆ (೧೯) ಹವನ, ಭದ್ರಾವತಿ (೨೦) ಮೂಡಣ, ಹಾವೇರಿ (೨೧) ಹಿರಿಯೂರು ವಾರಪತ್ರಿಕೆ, ಹಿರಿಯೂರು (೨೨) ನಾಗರಿಕ, ಹೊನ್ನಾವರ (೨೩) ಮುನ್ನಡೆ, ಶಿರಸಿ (೨೪) ಶ್ರೀಸಾಮಾನ್ಯ, ಸಿದ್ದಾಪುರ (೨೫) ಜನಕಲ್ಯಾಣ, ಬೆಳಗಾವಿ (೨೬) ಜನಮತರಂಗ, ಜಮಖಂಡಿ (೨೭) ಪ್ರಗತಿ ಮತ್ತು ಜನವಿಜಯ, ಬೆಳಗಾವಿ (೨೮) ತೀರ್, ಬೆಂಗಳೂರು

ಕನ್ನಡಿಗ, ಹುಬ್ಬಳ್ಳಿ (೩೧) ಭೀಕರ, ವಿಜಾಪುರ
ಜ್ಯೋತಿ, ಚಿತ್ರದುರ್ಗ (೩೪) ವಾರ್ತಾವಾಹಿನಿ,
ರು (೩೬) ಬಿಂಬ, ಬೆಂಗಳೂರು (೩೭) ಬಸವ
ಮೈಸೂರು (೩೯) ಯೋಗಿಶ್, ಗೋಕಾಕ.

ಯತ್‌ದೇಶ, ಮದ್ರಾಸು (೨) ಸುಡಿಜೇನು,
ರು (೪) ಸೋವಿಯತ್‌ಸಮೀಕ್ಷೆ, ಮದ್ರಾಸು
ಗ್‌ಇಂಡಿಯಾ, ಹೊಸಕೋಟೆ (೭) ಸಮನ್ವಯ,
ವಣಬೆಳಗೊಳ.

ಪ್ರಕಾಶ, ಹೊಳೆನರಸೀಪುರ (೨) ಗಾಯನಗಂಗಾ,
ರು (೪) ಜಿನವಾಣಿ, ಮೈಸೂರು (೫) ದಿವ್ಯಜ್ಯೋತಿ,
ರು (೭) ಪರಂಜ್ಯೋತಿ, ಹುಬ್ಬಳ್ಳಿ (೮) ಪಂಚಾಕ್ಷರ
ರು (೧೦) ಭಾರತದರ್ಶನ, ಬೆಂಗಳೂರು
ಮೈಸೂರು (೧೨) ಮೈಸೂರು ಸಹಕಾರ
ಯ ಪತ್ರಿಕೆ, ಬೆಂಗಳೂರು (೧೪) ಮೊಗವೀರ,
(೧೬) ವಿವೇಕಾಭ್ಯುದಯ, ಶ್ರವಣಬೆಳಗೊಳ
, ಬೆಂಗಳೂರು (೧೯) ಸದ್ಬೋಧಚಂದ್ರಿಕೆ.
(೨೧) ಪುಸ್ತಕಪ್ರಪಂಚ, ಮೈಸೂರು (೨೨)
ಪಾಲ (೨೪) ಜೀವನವಿಕಾಸ, ಕಲಬುರ್ಗಿ

[ರಕ್ಷಾಪತ್ರದ ೩ನೆಯ ಪುಟವನ್ನು ನೋಡಿ]

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ಸಂಪುಟ ೬೯ ಸಂಚಿಕೆ ೨
ಡಿಸೆಂಬರ್ ೧೯೮೪



ಸಂಪಾದಕರು

ಆರ್. ವಿ. ಕುಲಕರ್ಣಿ ಲಕ್ಷ್ಮಣ್ ತೆಲಗಾವಿ



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ ಚಾಮರಾಜಪೇಟೆ ಬೆಂಗಳೂರು ೧೮

# ಪರಿವಿಡಿ

# ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನಮಠದ ಹಸ್ತಪ್ರತಿ ಭಾಂಡಾರದ ಲಿಪಿಕಾರರು

ಡಾ|| ಬಿ. ಆರ್. ಹಿರೇಮಠ

ಜೈನ ಹಸ್ತಪ್ರತಿ ಭಾಂಡಾರಗಳಲ್ಲಿ ಕೊಲ್ಲಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನಮಠದ ಹಸ್ತಪ್ರತಿ ಭಾಂಡಾರ ಅತ್ಯಂತ ಶ್ರೀಮಂತವೂ ವಿಶಿಷ್ಟವೂ ಆದುದಾಗಿದೆ. ಈ ಹಸ್ತಪ್ರತಿ ಭಾಂಡಾರದಲಿ ಪದ್ಯಸಾಹಿತ್ಯ, ಗದ್ಯಸಾಹಿತ್ಯ, ಶಾಸ್ತ್ರಸಾಹಿತ್ಯ ಹಾಗೂ ವ್ಯಾಖ್ಯಾನ ಸಾಹಿತ್ಯಗಳಿಗೆ ಸಂಬಂಧಿಸಿದಂತೆ ೩೫೭ ತಾಳೆಗರಿ ಪ್ರತಿ, ೨೮೯ ಕಾಗದ ಪ್ರತಿ—ಹೀಗೆ ಒಟ್ಟು ೬೪೬ (ಕನ್ನಡ-ಸಂಸ್ಕೃತ-ಪ್ರಾಕೃತ) ಹಸ್ತಪ್ರತಿಗಳಿರುತ್ತವೆ. ಈ ಹಸ್ತಪ್ರತಿಗಳ ಅಧ್ಯಯನದ ಮೂಲಕ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನಮಠದ ಹಸ್ತಪ್ರತಿ ಭಾಂಡಾರದ ಲಿಪಿಕಾರರ ವಿಷಯವಾಗಿ ಗೊತ್ತಾಗುವ ಸಂಗತಿಗಳನ್ನು ಹೀಗೆ ವಿವರಿಸಬಹುದು :

ಜೈನ ಹವ್ಯಾಸಿ ಹಾಗೂ ವೃತ್ತಿ ಲಿಪಿಕಾರರು ಜ್ಞಾನಾವರಣೀಯ ಕರ್ಮೋಪಶಮನ, ಶಾಸ್ತ್ರದಾನ, ಸುಜ್ಞಾನ, ಶ್ರುತಜ್ಞಾನ ಮತ್ತು ಪ್ರಿಯಾರ್ಥವಾಗಿ ಕೃತಿಗಳನ್ನು ತಾವೇ ಪ್ರತಿಮಾಡಿಕೊಂಡಿದ್ದಾರೆ, ಬೇರೆಯವರಿಗೆ ಪ್ರತಿಮಾಡಿ ಕೊಟ್ಟಿದ್ದಾರೆ. ಇವರು ಸ್ವಪ್ರಯೋಜನ ಹಾಗೂ ಪರ ಪ್ರಯೋಜನಾರ್ಥವಾಗಿ ನಕಲುಗೊಳಿಸಿದ ಉದಾಹರಣೆಗಳು ಹೀಗಿವೆ :

> "ಸ್ವಸ್ತಿಶ್ರೀ ಲಕ್ಷ್ಮೀಸೇನ ಭಟ್ಟಾರಕ ಸ್ವಾಮಿಗಳಿಗೈಯ್ಯನವರ ಶಿಷ್ಯನಾದ ಶ್ರೀ ಜ್ಞಾನಸಾಗರವರ್ಣಿಯವರು ತಮ್ಮ ಜ್ಞಾನಾವರಣೀಯ ಕರ್ಮೋಪಶಮನ ನಿಮಿತ್ತವಾಗಿ . . . . ಸಂಪೂರ್ಣವಾಗಿ ಬರೆದ ಶ್ರೀ ಪದ್ಮಾವತಿ ಅಮ್ಮನವರ ಚರಿತೆ "[1]

---

1 ಕಾಪ್ರ. ೧೪೪/೩

"ಶ್ರೀಮಜ್ಜಯಕೀರ್ತಿದೇವರುಗಳ ಅತಿ ಪ್ರೀತಿಯ ಶಿಷ್ಯರಾದ ದ್ವಿಜಕುಲದ ದುಗ್ಗರಸನ ಅನುಜನಾದ ತಮ್ಮಣ್ಣನು . . . . . ಜ್ಞಾನಾವರಣೀಯ ಕರ್ಮ ನಿಮಿತ್ತ ಪರಿಹಾರಾರ್ಥವಾಗಿ ಬರೆದುಕೊಟ್ಟು ಸಂಪೂರ್ಣವಾಯಿತು "[2]

"ಶ್ರೀಮದ್ರಾಯರಾಜೇತ್ಯಾದಿ ಬಿರುದಾವಲಿ ವಿರಾಜಮಾನರಾದ ಶ್ರೀಮದಕಲಂಕ ದೇವರ ಶಿಷ್ಯರಾದ ಜಯಕೀರ್ತಿದೇವರು . . . . . ಹನ್ನಾವರದ ಚಂದ್ರಕೀರ್ತಿ ದೇವರಿಗೆ ಜ್ಞಾನಾವರಣೀಯ ಕರ್ಮದುಪಶಮನ ನಿಮಿತ್ತವಾಗಿ . . . . . ಬರೆದು ಕೊಟ್ಟರು "[3]

"ಶ್ರೀಮಡ್ಡಿಳ್ಳಿ ಕೊಲ್ಲಾಪುರ ಜಿನಕಂಚಿ ಪೆನುಗೊಂಡೆ ಸಿದ್ಧಸಿಂಹಾಸನಾಧೀಶ್ವರ ರಾದ ಜಿನಸೇನ ಭಟ್ಟಾರಕಸ್ವಾಮಿಯವರ ಶಿಷ್ಯರಾದ ಬುದ್ಧಿಸಾಗರವರ್ಣಿಗಳಿಗೆ ಗಿಡ್ಡಸೆಟ್ಟಿಪ್ಪನ ಕೊಮಾರ ಪದುಮಂಣ ಬರಕೊಟ್ಟ ಕ್ಷತ್ರಚೂಡಾಮಣಿ ಗ್ರಂಥ|| ಭದ್ರಂ ಭೂಯಾತ್ | ಶಾಸ್ತ್ರದಾನ ನಿಮಿತ್ಯವಾಗಿ "[4]

"ಬುಕ್ಕುಸೆಟ್ಟಿ ಅಕ್ಕಪ್ಪನವರಿಗೆ ಸಮ್ಯಕ್ತ್ವವ ಪ್ರಾಪ್ತಿನಿಮಿತ್ತವಾಗಿ ಪಂಚಪರಮೇಷ್ಠಿ ಗಳ ಬೊಲ್ಲಿ, ಕರ್ಮಪ್ರಕೃತಿ, ಷಟ್‌ಪ್ರಾಭೃತ, ಆತ್ಮಧ್ಯಾನ ಲಕ್ಷಣ, ಈರ್ಯಾ ಪಥ, ಸಾಮಾಯಿಕ, ಜಿನಸಿದ್ಧಾಂತವ ಶಾಸ್ತ್ರದಾನಾರ್ಥವಾಗಿ ದ್ರಾವಿಡದೇಶ ಅಪ್ಪಣ್ಣ ವಿದ್ಯಾರ್ಥಿ "[5]

"ಪೆನುಗೊಂಡೆಯ ಲಕ್ಷ್ಮೀಸೇನ ಭಟ್ಟಾರಕರ ಶಿಷ್ಯರಭಿನವ ಚಿಕ್ಕ ಲಕ್ಷ್ಮೀಸೇನ ದೇವರು ಗುಂಮಟಕ್ಕಗಳಿಗೆ ಪಂಚಪರಮೇಷ್ಠಿಗಳ ಬೊಲ್ಲಿಯನು ಅಜ್ಞಾನವಿಚ್ಛಿತಿ ಸುಜ್ಞಾನಪ್ರಾಪ್ತಿ ನಿಮಿತ್ತವಾಗಿ ಬರೆದುಕೊಟ್ಟ "[6]

"ಶ್ರೀಮದಭಿನವ ಜಿನಸೇನಸ್ವಾಮಿಯವರ ಪರಮಪ್ರಿಯಾಗ್ರಶಿಷ್ಯವರ್ಗ ಆದಿ ವರ್ಣಿಗಳು. . . . . ರಾಮಚಂದ್ರಪುರಾಣ ಬರೆದು ಮುಗಿಯಿತು. . . . . . ಆದಿವರ್ಣಿಗಳು ಶ್ರುತಜ್ಞಾನ ನಿಮಿತ್ತ್ಯವಾಗಿ ಪಂಪರಾಮಾಯಣ ಕರವೀರ ಕೊಲ್ಲಾಪುರದ ಶ್ರೀ ಪಾರಿಶ್ವನಾಥನ ಚೈತ್ಯಾಲಯದೊಳಿರುವ ರಾಯಪ್ಪ ಉಪಾಧ್ಯಗೆ ಶಾಸ್ತ್ರದಾನ ಕೊಟ್ಟ . . . . ."[7]

---

2 ತಾಪ್ರ. ೪೬೦, ಧರ್ಮಪರೀಕ್ಷೆ 3 ತಾಪ್ರ. ೨೪/೧, ರತ್ನಕರಂಡಕ ಕಥೆ 4 ತಾಪ್ರ. ೮೧
5 ಕಾಪ್ರ. ೨೫೨/೭, ಧ್ಯಾನಲಕ್ಷಣ ಟೀಕೆ 6 ಕಾಪ್ರ, ೨೨೦/೧೧, ಚಿನ್ಮಯ ಚಿಂತಾಮಣಿ
7 ಕಾಪ್ರ. ೧೫೪

"ಅತ್ತಣೂರ ಮಾಕವೆಗೆ ಬರದುಕೊಟ್ಟರು. ಅನಂತಕೀರ್ತಿದೇವರು ಬಡಗನವರು ಪ್ರಿಯಾರ್ಥ ನಿಮಿತ್ತವಾಗಿ"[8]

"ಬೆಳ್ಗುಳದ ಕವಿಯಂಣ್ಣೈಯ್ಯನ ತೃತೀಯ ಪುತ್ರನಾದಂಥಾ ಬ್ರಹ್ಮಸೂರಿ ಪಂಡಿತನು ಕೊಲ್ಲಾಪುರದ ಲಕ್ಷ್ಮೀಸೇನಸ್ವಾಮಿಯವರ ಪಾದಪದ್ಮಂಗಳಿಗೆ ಬರೆದು ಕೊಟ್ಟ ಜ್ಯೋತಿಷ ಪುಸ್ತಕ. . . . ."[9]

"ಅಪಜೈಯ್ಯನ ಕುಮಾರ ಚೆನ್ನಯ್ಯನವರಿಗೆ ಸ್ತ್ಥಾನದವರ ಚಿನ್ನಪ್ಪನ ಮಗ ಪದುಮಯ್ಯನ ಮಗ ಬ್ರಹ್ಮಯ್ಯನು ಬರೆದ ಹರಿವಂಶ ಪುಸ್ತಕ"[10]

"ಜಿನಸಮಯ ಶರಧಿ ಹಿಮಕರ
ನೆನಿಸುವ ಕಾಮಂಣಸೆಟ್ಟಿಗತಿಶಯದಿಂದಂ
ಅನುಪಮ ಧರ್ಮಾಮೃತಮಂ
ಮನದೊಳ್ನಲಿವುತ್ತ ದೊಡ್ಡತಂಮಂ ಬರೆದಂ"[11]

ಬತ್ತಿಬುದ್ದಪ್ಪನ ಪುತ್ರ ಧರ್ಮನು ಕೊಲ್ಲಾಪುರದ ಪಾರಿಶ್ವಮತಿಬಾಯಿ ಜೀಯರಿಗೆ ದ್ವಾದಶಾನುಪ್ರೇಕ್ಷೆ ಗ್ರಂಥವನು ಬರೆದು ಕೊಟ್ಟನು"[12]

"ಗುರುಗಳ ಬಸ್ತಿಯ ಕೌಪೀನ ಆದಿದೇವರ್ಗೆ ಗುಮ್ಮಳಾಪುರದ ಮಲ್ಲೀದೇವರ ಮಗ ಚೆನ್ನಮಲ್ಲಂ ಬರೆದ"[13]

"ವಿದ್ವಚ್ಚಕ್ರವರ್ತಿಗಳುಂ ವಃಖಡಿ ಕಡಿಯಾಣ ಪರಗೃಹಾಮಾದಿತ್ಯರುಂ ಮಧ್ಯಾಹ್ನ ಕಲ್ಪವೃಕ್ಷರುಂ ದಶಗ್ಧ ಕರ್ಮಾರಣ್ಯದಹನದಕ್ಷರುಂ ಶ್ರೀಮಜ್ವಾಲಾಮಾಲಿನೀ ವರಪ್ರಸಾದೋಪರುಂ ಡಿಳ್ಳಿ ಕೊಲ್ಲಾಪುರ ಜಿನಕಂಚಿ ಪೆನುಗೊಂಡೆ ಸಿದ್ಧಸಿಂಹಾಸನಾಧೀಶ್ವರ ಶ್ರೀಮದಭಿನವ ಲಕ್ಷ್ಮೀಸೇನ ದೇವರು ಕರಿವಿದ್ಯಸಾಗರ ಜೀಯನವರ ಪ್ರಿಯಾಗ್ರಶಿಷ್ಯರಾದ ಯಮನಿಯಮ . . . . ಶೀಲಗುಣರುಮಪ್ಪ ಶ್ರೀಜಿನಸೇನದೇವರಿಗೆ ಬೆಳಗುಳದ ಗೊಮ್ಮಟೇಶ್ವರ ಸ್ವಾಮಿಯವರ ಯಿಂದ್ರವರ್ಗದ ಸ್ಥಾನಿಕ ಶಾಂತಕವಿ ದೊಡ್ಡಯ್ಯನ ಮಗ ಜವನಪ್ಪ ಬರೆದು ಕೊಟ್ಟ ನಾಗಕುಮಾರ ಚರಿತೆ"[14]

"ಬರದು ಧರ್ಮಮತಿ ಅಕ್ಕಳಜೀಯವರಿಗೆ ಕೊಟ್ಟರು . . . . . ಶ್ರೀಚಾರುಕೀರ್ತಿಯವರ ಶಿಷ್ಯ ಧರ್ಮಕೀರ್ತಿವರ್ಣಿಯು ಬರದರು"[15]

---

8 ತಾಪ್ರ. ೨೫೮ 9 ತಾಪ್ರ. ೨೫೮ 10 ತಾಪ್ರ. ೧೩೨ 11 ತಾಪ್ರ. ೨೭೮
12 ತಾಪ್ರ. ೩೫ 13 ತಾಪ್ರ. ೧೬೬/೨ 14 ತಾಪ್ರ. ೧೪೨ 15 ತಾಪ್ರ. ೭೫/೪

"ಭೋಗಂಣನವರಿಗೆ ರತ್ನಗಿರಿ ದಾಸಿ ಕೊಂಡ್ಯೆಯ್ಯನ ಮಗ ವಾಪ್ಯೆಯ್ಯ ಬರಕೊಟ್ಟ ಜಯಮುನಿ ಪುಸ್ತಕ"[16]

ಜೈನ ಹವ್ಯಾಸಿ ಲಿಪಿಕಾರರಂತೆ ಲಿಪಿಕಾರ್ತಿಯರೂ ಅನೇಕ ಕೃತಿಗಳನ್ನು ನಕಲುಗೊಳಿಸಿದ ಉದಾಹರಣೆಗಳು ಸಿಗುತ್ತವೆ:

"ಸ್ವಸ್ತಿ ಶ್ರೀಸೇನಗಣಾಗ್ರಗಣ್ಯರು ಕರವೀರಕ್ಷೇತ್ರ ಕೊಲ್ಲಾಪುರದ ಶ್ರೀ ಜಿನಸೇನ ಭಟ್ಟಾರಕಸ್ವಾಮಿ ಕರಕೃತ ಸಂಜಾತ ಗುಣಭದ್ರಸ್ವಾಮಿಗಳ ಶಿಷ್ಯರು ಶಾಂತಿಮತಿ ಕಂತಿಯರು ಅಷ್ಟಿಗೆಪುರದ ಶ್ರೀ ಅಜಿತನಾಥನ ಚೈತ್ಯಾಲಯದಲ್ಲಿ ಪ್ರತಿ ನೋಡಿ ಬರೆದೆವು . . . .[17]

"ಹೇಮಳಂಬಿ ಸಂವತ್ಸರದ ರತ್ನಕರಂಡಕೇ ಶ್ರಾವಣ ಶುದ್ಧ ೧೪ಯಲು ರತ್ನ ಕರಂಡಕದ ಪ್ರತಿಯನು ಹಂಗುಳದ ದೇವರವುಪಾಧ್ಯರು ಬರದ್ದು | ವಿಕ್ರಮ ನಾಮ ಸಂವತ್ಸರ ಫಾಲ್ಗುಣ ಮಾಸ ಬಹುಳ ದಶಮಿಯೊಳು ಬರದರು ಪಾರ್ಶ್ವಮತಿಬಾಯಿಜೀಯವರು"[18]

"ಲಲಿತಕೀರ್ತಿ ಭಟ್ಟಾರಕ ದೇವರುಗಳ ಪಾದಪದ್ಮಕ್ಕೆ ತುಂಬಿಯೆನಿಸಿದ ವರ್ಧಮಾನಕ್ಕಗಳು ಸೇನಗಣದ ನೇಮಕ್ಕಗಳಿಗೆ ಶಾಸ್ತ್ರದಾನವಾಗಿ ಬರೆದುಕೊಟ್ಟ ಧನ್ಯಕುಮಾರ ಚರಿತೆ"[19]

"ಪೆನುಗೊಂಡೆಯ ಶ್ರೀ ಶಾಂತಿಮತಿ ಅವಗಳ ಜೀಯನವರು ತಮಗೆ ಕೇವಲಜ್ಞಾನ ಪ್ರಾಪ್ತಿ ನಿಮಿತ್ತವಾಗಿ ಬರದಂಥಾ ಹಿರೇ ಪಂಚಪರಮೇಷ್ಠಿಗಳ ವ್ಯಾಖ್ಯಾನ ಸಮಾಪ್ತ . . . ."[20]

"ಶ್ರೀಮತಿ ಅಕ್ಕಗಳು ಬರದರು ಜಿನಮುನಿತನಯ"[21]

"ಯಲ್ಲಣ್ಣನ ಪುತ್ರಿ ಕಾಳಾವ್ವ××××"[22]

ಮೇಲಿನ ಈ ಉದಾಹರಣೆಗಳಿಂದ ಶಾಂತಿಮತಿಕಂತಿ, ಪಾರ್ಶ್ವಮತಿಬಾಯಿ, ವರ್ಧಮಾನಕ್ಕ, ಶಾಂತಿಮತಿ, ಶ್ರೀಮತಿ ಅಕ್ಕ ಹಾಗೂ ಕಾಳವ್ವೆಯರು ಜೈನ ಹವ್ಯಾಸಿ ಲಿಪಿಕಾರ್ತಿಯರೆಂಬುದು ಸ್ಪಷ್ಟವಾಗುತ್ತದೆ. ಇದಲ್ಲದೆ ಅಷ್ಟಿಗೆಪುರದ ಅಜಿತನಾಥ ಬಸದಿಯಲ್ಲಿರುವ ಪ್ರತಿ ಶಾಂತಿಮತಿಕಂತಿಯರು ನಕಲುಗೊಳಿಸಿದ

---

16 ತಾಪ್ರ. ೧೬೬ 17 ನಿಂಬಸಾಮಂತ ಚರಿತೆ, ಪುಟ–೧೨೮ 18 ಕಾಪ್ರ. ೧೮೩, ರತ್ನಕರಂಡಕ ಶ್ರಾವಕಾಚಾರ ವ್ಯಾಖ್ಯಾನ 19 ತಾಪ್ರ. ೧೫೭/೨ 20 ತಾಪ್ರ. ೨೫೩, ಂಪಚಪರಮೇಷ್ಠಿಗಳ ಬೊಲ್ಲಿ 21 ಕಾಪ್ರ. ೧೭೭/೫ 22 ತಾಪ್ರ. ೨೦೭, ಪದ್ಮಾವತಿ, ಚರಿತೆ

ನಿಂಬಸಾಮಂತಚರಿತೆ ಕೃತಿಗೂ ಹಂಗುಳದ ಉಪಾಧ್ಯಾಯರ ಪ್ರತಿ ರತ್ನಕರಂಡಕ ಶ್ರಾವಕಾಚಾರ ವ್ಯಾಖ್ಯಾನ ಗ್ರಂಥಕ್ಕೂ ಆಧಾರಪ್ರತಿಗಳಾಗಿರುವುದು ವಿದಿತವಾಗುತ್ತದೆ.

ಹಸ್ತಪ್ರತಿಗಳ ಆದಿ-ಅಂತ್ಯಭಾಗದ ಪ್ರಶಸ್ತಿಗಳಿಂದ ಲಿಪಿಕಾರರ ಚರಿತ್ರೆಯ ರಚನಾಕಾರ್ಯಕ್ಕೆ ಅತ್ಯಂತ ಉಪಯುಕ್ತ ಆಕರ ಸಾಮಗ್ರಿಯೆನಿಸಿದ ಲಿಪಿಕಾರರ ಜನ್ಮಗ್ರಾಮ, ಗೋತ್ರ-ಸೂತ್ರ, ಪಿತೃಪರಂಪರೆ, ಗುರುಪರಂಪರೆ, ಲೇಖನಗೈದ ಸ್ಥಳ, ಲೇಖನ ಮಿತಿ ಮುಂತಾದ ಮಹತ್ವದ ಮಾಹಿತಿ ದೊರೆಯುತ್ತದೆ. ಜೈನ ಲಿಪಿಕಾರರ ಚರಿತ್ರೆಗೆ ಸಂಬಂಧಿಸಿದಂತೆ ಲಭಿಸುವ ಉದಾಹರಣೆಗಳು ಹೀಗಿರುತ್ತವೆ:

"ಈ ಗ್ರಂಥವು ಉದಗಾವಿಯಲ್ಲಿರುವ ನೇಮೇಶ ಉಪಾಧ್ಯಾಯನಿಂದ ಬರದು ಮುಗಿಸಲ್ಪಟ್ಟಿತು" (ಶಕ ೧೮೫೧, ಶ್ರಾವಕಾಚಾರ ವ್ಯಕ್ತಿ)[23]

"ಪ್ರತಿಯಿದ್ದ ಹಾಗೆ ನೋಡಿ ಬರದಾತನು ಕೌಲಿನಿಯ ಗುಮ್ಮಣ್ಣನ ಮಗನು ಹಿರಿಯ ಜಯಣ್ಣನು"(ವಿಭವ ಸಂವತ್ಸರ, ಬಿಜ್ಜಣ ಚರಿತೆ)[24]

"ಸಮಡೋಳಿ ನೇಮಣ್ಣ ಉಪಾಧ್ಯಾಯನ ಹಸ್ತಾಕ್ಷರ" (ಶಕ ೧೭೧೭, ಪೂರ್ವ ಪುರಾಣ)[24(2)]

"ಕರವೀರಕ್ಷೇತ್ರ ಪಾರಿಶ್ವನಾಥನ ಅಂತಪ್ಪ ಬರೆದನು" (ವ್ಯಯನಾಮ ಸಂವತ್ಸರ, ಕೌಮುದಿ ಕಥೆ)[25]

"ಶ್ರೀ ಬೆಳಗುಳದ ಭಂಡಾರಿ ಬಸದಿ ಚತುರ್ವಿಂಶತಿ ತೀರ್ಥಂಕರ ಪಾದಾರ್ಚಕ ಯಿಂದ್ರವರ್ಗ ಬ್ರಹ್ಮಯ್ಯನು ಬರೆದ ನಾಗಕುಮಾರ ಚರಿತ" (ಶಕ ೧೭೭೪)[26]

"ಬರದಾತನು ಕೌಲಿನಿಯ ಗುಮಿಸೆಟ್ಟಿ ಮಗನು ಹಿರಿಯ ಜಯಣ್ಣನ ಪೊಸ್ತಕವು" (ಯುವ ಸಂವತ್ಸರ, ಪಂಚಪರಮೇಷ್ಠಿಗಳ ಬೊಲ್ಲಿಯ ಟೀಕೆ)[27]

"ಹಸ್ತಾಕ್ಷರ ಬಾಬಾಜಿ ಬೊಮ್ಮಣ್ಣ ಉಪಾಧ್ಯೆ ಸದಲಗಿ ಈತನು ಬರದದ್ದು ಮುಗಿಯಿತು" (ಶಕ ೧೮೦೩, ನವನಿಧಿಸ್ವರೂಪ)[28]

"ಈ ಗ್ರಂಥ ಬರೆದ ಸದಲಿಗೆಯ ಕಲ್ಲಬಸದಿಯ ಭರಮಣ್ಣನ ಪುತ್ರ ಜಿನ್ನಪ್ಪ" (ಕ್ರೋಧನ ಸಂವತ್ಸರ, ನೇಮಿಜಿನೇಶಸಂಗತಿ)[29]

---

23 ಕಾಪ್ರ. ೪೨/೨ 24 ಕಾಪ್ರ. ೩೬/೧ 24(2) ಪೂರ್ವಪುರಾಣಂ, ಪೀಠಿಕೆ, ಪುಟ—೧೯
25 ಕಾಪ್ರ. ೨೬೫/೧ 26 ಕಾಪ್ರ. ೧೪೧ 27 ತಾಪ್ರ. ೩೬/೩ 28 ತಾಪ್ರ. ೨೬೧/೬
29 ಕಾಪ್ರ. ೨೫೧

"ಕೊಡೊಲಿಗ್ರಾಮದ ಆದಿತೀರ್ಥೇಶ್ವರನ ಪಾದಾರವಿಂದವಂದಿತ ಶೀಲಸಾಗರ ಜೀಯನವರ ಶಿಷ್ಯ ಆದಪ್ಪ ತನ್ನ ಸ್ವಹಸ್ತದಿಂ ಪ್ರತಿಯಿದ್ದಾಂಗೆ ಬರದನು"[30]

"ಶ್ರೀವತ್ಸಗೋತ್ರದ ಬೋಗೋದಿಯ ಪದುರಸುಪಾಧ್ಯಾಯರ ಮಗ ಮುನಿಯಪ್ಪ ಬರದನು" (ಶಕ ೧೪೨೭, ಚಾವುಂಡರಾಯ ಪುರಾಣ)[30(೨)]

"ದೊಡರೊಟ್ಟಿ ಬೊಂಮಪ್ಪಸೆಟ್ಟಿ ಮಗ ಪದುಮಂಣ ಬರದ ಶ್ರೀಪಾಲಚರಿತೆಗೆ ಶುಭಮಸ್ತು"[31]

"ಕೊಲ್ಲಾಪುರದ ನೇಮಿನಾಥನ ಶ್ರೀಪಾದ ಸೇವಕ ಗುಮ್ಮಟನಾಥನ ಪತ್ನಿ ನೇಮಾಂಬಿಕೆ ವರಪುತ್ರ ಉಪಾಧ್ಯಾಯ ಜಿನದತ್ತನು ಬರಕೊಂಡ ಪ್ರತಿ ಇದ್ದ ಹಾಂಗೆ. ತಪ್ಪುಳ್ಳರೆ ತಿದ್ದುವುದು" (ಜಯನೃಪ ಕಾವ್ಯ)[32]

"ಶ್ರೀಮತು ಜಿನವಂಶಾಂಬುಧಿ ಚಂದ್ರಮನೆನಿಸಿದ ಹಂಗರಿಕೆಯ ಗ್ರಾಮದ ಪ್ರಭು ಮಲ್ಲೈಯನಾತ್ಮಜನೆನಿಸಿದ ಗುಂಮಂಣನಿಗೀತನ ಪ್ರೇಮದ ಸತಿ ಮಲ್ಲಮ್ಮನೆನಿಸಿರ್ಪ ವರಕುಮಾರನು ನಾಗಣ್ಣನು ತನಗಾಗಲಿ ಪುಣ್ಯಾರ್ಥವೆಂದು ಜ್ಞಾನಚಂದ್ರ ಚರಿತೆಯ ಮನವೊಲಿದು ಪೂರ್ವಪ್ರತಿಯ ನೋಡಿ ಬರೆದನು"[33]

"ಬೆಳಗುಳದ ಗೊಮ್ಮಟೇಶ್ವರ ಸ್ವಾಮಿಯವರ ಯಿಂದ್ರವರ್ಗದ ಸ್ಥಾನಿಕ ಶಾಂತಕವಿ ದೊಡ್ಡಯ್ಯನ ಮಗ ಜವನಪ್ಪ ಬರೆದುಕೊಟ್ಟ ನಾಗಕುಮಾರ ಚರಿತೆ" (ಶಕ ೧೬೩೪)[34]

"ಗೊಮ್ಮಟಸ್ವಾಮಿಯವರ ಪಾದಾರವಿಂದ ಸ್ಥಾನಿಕಯಿಂದ್ರವರ್ಗದ ಶಾಂತಕವಿ ದೊಡ್ಡಯ್ಯನವರ ಮಗ ಜವನಪ್ಪನು ಬರದ ದ್ವಾದಶಾನುಪ್ರೇಕ್ಷೆ"[35]

"ಸ್ವಾನದವರ ಚಿನ್ನಪ್ಪನ ಮಗ ಪದುಮಯ್ಯನ ಮಗ ಬ್ರಹ್ಮಯ್ಯನು ಬರೆಡ ಹರಿವಂಶ ಪುಸ್ತಕ" (ಶಕ ೧೬೯೫)[36]

"ಗುಮ್ಮಳಾಪುರದ' ಮಲ್ಲೇದೇವರ ಮಗ ಚೆನ್ನಮಲ್ಲಂ ಬರೆದ" (ಸೂಕ್ತಿ ಮುಕ್ತಾವಳಿ ಟೀಕೆ, ಶಕ ೧೫೩೩)[37]

---

30 ಕಾಪ್ರ. ೨೩೬/೩ 30(2) ತಾಪ್ರ. ೧೪೪ 31 ತಾಪ್ರ. ೧೪೫ 32 ಕಾಪ್ರ. ೧೦೦/೧ 33 ತಾಪ್ರ. ೩೨೧ 34 ತಾಪ್ರ. ೧೪೨ 35 ತಾಪ್ರ. ೧೫ 36 ತಾಪ್ರ. ೧೩೨ 37 ತಾಪ್ರ. ೧೭೭/೨

"ಚಾರುಕೀರ್ತಿಯವರ ಶಿಷ್ಯ ಧರ್ಮಕೀರ್ತಿವರ್ಣಿಯು ಬರದರು" (ಚತುರಾನು ಯೋಗ, ಶಕ ೧೭೨೮)[38]

"ರತ್ನಗಿರಿ ದಾಸಿ ಕೊಂಡೈಯ್ಯನ ಮಗ ವಾಪೈಯ್ಯ ಬರಕೊಟ್ಟ ಜಯಮುನಿ ಪುಸ್ತಕ"[39]

"ಶ್ರೀ ಲಕ್ಷ್ಮೀಸೇನ ಭಟ್ಟಾರಕ ಸ್ವಾಮಿಗಳಿಗೈಯ್ಯನವರ ಶಿಷ್ಯನಾದ ಶ್ರೀ ಜ್ಞಾನ ಸಾಗರವರ್ಣಿಯವರು . . . ." (ಪದ್ಮಾವತಿ ಚರಿತೆ, ಶಕ ೧೭೪೫)[40]

"ಶ್ರೀಮದ್ರಾಯರಾಜೇತ್ಯಾದಿ ಬಿರುದಾವಲಿ ವಿರಾಜಮಾನರಾದ ಶ್ರೀಮದಕ ಲಂಕದೇವರ ಶಿಷ್ಯರಾದ ಜಯಕೀರ್ತಿದೇವರು" (ರತ್ನಕರಂಡಕ ಕಥೆ, ಶಕ ೧೫೧೧)[41]

"ಪೆನುಗೊಂಡೆಯ ಲಕ್ಷ್ಮೀಸೇನಭಟ್ಟಾರಕರ ಶಿಷ್ಯರಭಿನವಲಕ್ಷ್ಮೀಸೇನ ದೇವರು . . . ." (ಚಿನ್ಮಯ ಚಿಂತಾಮಣಿ)[42]

"ಬೆಳ್ಗುಳದ ಕವಿಯಂಣೈಯ್ಯನ ತೃತೀಯ ಪುತ್ರನಾದಂಥಾ ಬ್ರಹ್ಮಸೂರಿ ಪಂಡಿತನು . . . ." (ಜ್ಯೋತಿಷ್ಯ ಪುಸ್ತಕ)[43]

"ಶ್ರೀಮದಭಿನವ ಜಿನಸೇನಸ್ವಾಮಿಯವರ ಪರಮಪ್ರಿಯಾಗ್ರಶಿಷ್ಯವರ್ಗ ಆದಿ ವರ್ಣಿ . . . ." (ಶಕ ೧೭೮೮, ರಾಮಚಂದ್ರಚರಿತಪುರಾಣ)[44]

"ಶ್ರೀ ಸೇನಗಣಾಗ್ರಗಣ್ಯರು ಕರವೀರಕ್ಷೇತ್ರ ಕೊಲ್ಲಾಪುರದ ಶ್ರೀ ಜಿನಸೇನ ಭಟ್ಟಾರಕಸ್ವಾಮಿ ಕರಕೃತ ಸಂಜಾತ ಗುಣಭದ್ರಸ್ವಾಮಿಗಳ ಶಿಷ್ಯರು ಶಾಂತಿ ಮತಿಕಂತಿಯರು . . . ." (ನಿಂಬಸಾಮಂತ ಚರಿತೆ)[45]

"ಲಲಿತಕೀರ್ತಿ ಭಟ್ಟಾರಕ ದೇವರುಗಳ ಪಾದಪದ್ಮಕೆ ತುಂಬಿಯೆನಿಸಿದ ವರ್ಧ ಮಾನಕ್ಕಗಳು . . . ." (ಧನ್ಯಕುಮಾರ ಚರಿತೆ)[46]

"ಗಿಡ್ಡಸೆಟ್ಟಿಪ್ಪನ ಕೊಮಾರ ಪದುಮಂಣ . . . ." (ಕ್ಷತ್ರಚೂಡಾಮಣಿ)[47]

"ಹಂಗುಳದ ದೇವರವುಪಾಧ್ಯಾಯರು . . . ."[48]

---

38 ತಾಪ್ರ. ೨೫/೪ 39 ತಾಪ್ರ. ೧೬೬ 40 ಕಾಪ್ರ. ೧೪೪/೩ 41 ತಾಪ್ರ. ೨೩/೦ 42 ಕಾಪ್ರ. ೨೨೦/೧೧ 43 ತಾಪ್ರ. ೨೫೮ 44 ಕಾಪ್ರ. ೧೪೩ 45 ನಿಂಬಸಾಮಂತ ಚರಿತೆ, ಪುಟ–೧೨೪ 46 ತಾಪ್ರ. ೧೫೭/೨ 47 ತಾಪ್ರ. ೮೧ 48 ಕಾಪ್ರ. ೧೮೩

"ಪೆನುಗೊಂಡೆಯ ಶ್ರೀ ಶಾಂತಿಮತಿ ಅವಗಳ ಜೀಯನವರು" (ಶಕ ೧೫೪೩, ಪಂಚಪರಮೇಷ್ಠಿಗಳ ಬೊಲ್ಲಿ)[49]

"ಇಂದ್ರಬಂದಂಣನವರ ಜಯಣ್ಣನ ಹಸ್ತ ಅಕ್ಷರವು ...." (ಧರ್ಮ ಪರೀಕ್ಷೆ)[50]

"ಬೇಲೂರ ಚಂದ್ರಯ್ಯ ವೈಶ್ಯರ ಚಂದ್ರಯ್ಯನು ...." (ವಡ್ಡಾರಾಧನೆ)[51]

"ಈ ಗ್ರಂಥ ಬರೆದ ಸದಲಿಗೆಯ ಕಲ್ಲಬಸದಿಯ ಭರಮಣ್ಣನ ಪುತ್ರ ಜಿನ್ನಪ್ಪ ಬರದನು ...." (ನೇಮಿಜಿನೇಶ ಸಂಗತಿ)[52]

"ಷಟ್ಪುರದ ಪಾರಿಶ್ವನಾಥನ ದಿವ್ಯಚೈತ್ಯಾಲಯದಲ್ಲಿ ಬತ್ತಿ ಬುದ್ದಪ್ಪನ ಪುತ್ರ ಧರ್ಮನು ಕೊಲ್ಲಾಪುರದ ಪಾರಿಶ್ವಮತಿಬಾಯಿಜೀಯರಿಗೆ ದ್ವಾದಶಾನುಪ್ರೇಕ್ಷೆ ಗ್ರಂಥ ಬರೆದುಕೊಟ್ಟನು" (ಶಕ ೧೭೫೭)[53]

"ಕೇಸಾಪುರದ ಪಾರಿಸ್ವನಾಥ ಚೈತ್ಯಾಲಯದಲ್ಲು ಪಾಟಣ್ಯಾ ತವನಪ್ಪನ ತತ್ಪುತ್ರನು ಗಂಗಸೆಟ್ಟಿ ಬರೆದ ಪ್ರಾಭೃತಸಾರ" (ಶಕ ೧೬೮೨)[54]

"ಕೇಸಾಪುರದ ಪಾರಿಶ್ವನಾಥ ದಿವ್ಯ ಚೈತ್ಯಾಲಯದಲ್ಲು ಶ್ರೀ ಚಂದ್ರಸೇನ ಸ್ವಾಮಿಗಳ ಶಿಷ್ಯನಾದಂಥ ಪಾಟಣ್ಯಾ ತವನಪ್ಪನ ತತ್ಪುತ್ರ ಗಂಗಣ್ಣ ಸ್ವಹಸ್ತದಲು ಬರದಂತ ರತ್ನಕರಂಡಕ ವ್ಯಾಖ್ಯಾನ" (ಶಕ ೧೬೮೩)[55]

"ಪೆನುಗೊಂಡೆಯ ಸಣ್ಣಕ್ಕಿಯದೇವಿಸೆಟ್ಟಿಯ ಮಗ ಪಾಯಣ್ಣನು ಕುಬಳೆಯ ಆದೀಶ್ವರನ ಚೈತ್ಯಾಲಯದಲ್ಲಿ ಬರೆದ ಕರ್ಮಪ್ರಕೃತಿ" (ಶಕ ೧೫೨೯)[56]

"ಹುವ್ವಿನಬಾಗೆಯ ಶ್ರೀ ಅನಂತನಾಥನ ಚೈತ್ಯಾಲಯದಲ್ಲಿ .... ಶ್ರೀ ಸೇನಗಣಾಂಬರ ಸೂರ್ಯರೆನಿಸಿದ ಶ್ರೀ ಸಮಂತಭದ್ರದೇವರ ಪ್ರಿಯಾಗ್ರ ಶಿಷ್ಯರಾದ ಪ್ರಿಯಾಗ್ರಶಿಷ್ಯ ಯಿಂದ್ರಜಾಯಂಣ ದ್ವಾದಶಾನುಪ್ರೇಕ್ಷೆಯ ಬರದ ಪುಸ್ತಕ" (ಶಕ ೧೫೦೭)[57]

"ಕೊಡೊಲಿ ಗ್ರಾಮದೊಳೊಪ್ಪುವ ಶ್ರೀ ಆದಿಜಿನಾಲಯದೊಳು ಗುರುಜಯಸೇನರ ಶಿಷ್ಯ ಶೀಲಾಬ್ಧಿಯ ವರಶಿಷ್ಯ ಆದಪ್ಪನು ಬರದನು ವಜ್ರಕುಮಾರ ಚರಿತೆಯ"[58]

---

49 ತಾಪ್ರ. ೨೫೩ 50 ಕಾಪ್ರ. ೬೭/೭ 51 ತಾಪ್ರ. ೪೫ 52 ಕಾಪ್ರ. ೨೫೧
53 ಕಾಪ್ರ. ೩೫ 54 ಕಾಪ್ರ. ೧೭/೫ 55 ಕಾಪ್ರ. ೧೭/೬ 56 ತಾಪ್ರ. ೨೧
57 ಕಾಪ್ರ. ೬೭/೪ 58 ಕಾಪ್ರ. ೧೫೦/೨

"ಶ್ರೀ ಆದೀಶ್ವರ ಸ್ವಾಮಿನಃ ಚೈತ್ಯಾಲಯೇ ಕ್ಷತ್ರ ಚೂಡಾಮಣಿ ಸಮಾಪ್ತಂ" (ಶಕ ೧೭೮೨)[59]

"ನೇಮೀಶ್ವರನ ಚೈತ್ಯಾಲಯದಲ್ಲಿ ಮುಗಿಯಿತು" (ಭಾವನಾಮ ಸಂವತ್ಸರ, ಪಂಚಾಸ್ತಿಕಾಯ ಪ್ರಾಭೃತ ಟೀಕೆ)[60]

"ಯೀ ಜಂಬೂದ್ವೀಪದ ಮಹಾಮೇರುವಿನ ದಕ್ಷಿಣಭಾಗದ ಭರತಾರ್ಯಖಂಡ ಹೊಳಗಣ ಕುಂಥಳದೇಶದ ಕೊಲ್ಲಾಪುರದ ಸಿಂಹಾಸನದ ಸಮೀಪದ ಸಾವಗಾವಿ ಯೆಂಬ ಗ್ರಾಮದ ಶ್ರೀ ಚಂದ್ರಪ್ರಭಸ್ವಾಮಿಯ ಮಹಾಚೈತ್ಯಾಲಯದಲ್ಲಿ ಪೂರ್ವಭದ್ರ ನಕ್ಷತ್ರದಲ್ಲಿ ಶೋಭನನಾಮ ಯೋಗದಲ್ಲಿ ಮೂರನೆಯ ಜಾವದಲ್ಲಿ ಧರ್ಮಸೇನದೇವರ ಹಸ್ತಾಕ್ಷರದಿಂ ಬರದು ಮುಗಿಯಿತು" (ಶಕ ೧೫೬೬)[61]

"ಬೆಳಗಾವಿ ಪಾರಿಶ್ವನಾಥಸ್ವಾಮಿ ಚೈತ್ಯಾಲಯದಲ್ಲಿ ಬರದ ಧನಂಜಯ. ಗುಮ್ಮಟನಾಥನ ಸ್ವಹಸ್ತ ಬರಹ" (ರುಧಿರೋದ್ಗಾರಿ ಸಂವತ್ಸರ)[62]

"ಕೊಲ್ಲಾಪುರದ ಶ್ರೀ ಪಾರಿಶ್ವ ಚೈತ್ಯಾಲಯದಲ್ಲಿ ಸಮಾಪ್ತಿ" (ಶಕ ೧೬೬೦, ದ್ವಾದಶಾನುಪ್ರೇಕ್ಷೆ)[63]

"ನಂದಾಪುರದ ಆದಿನಾಥನ ದಿವ್ಯಚೈತ್ಯಾಲಯ ಬಸ್ತಿಯಲಿ ಸಮಾಪ್ತ ಆಯಿತೂ" (ಶಕ ೧೭೨೦, ದ್ವಾದಶಾನುಪ್ರೇಕ್ಷೆ)[64]

"ಜಂಬೂದ್ವೀಪದ ಭರತಖಂಡದ ಮಧ್ಯದೇಶ ಯಿಜಪುರದ ನಿಕುರ ಆಲಂದಿ ಮಹಾನಗರ ಸುಭಸ್ಥಾನದಲ್ಲಿ ಶ್ರೀ ಪಾರ್ಶ್ವನಾಥ ದಿವ್ಯಚೈತ್ಯಾಲಯದಲ್ಲಿ ಜ್ಞಾನ ಚಂದ್ರನ ಮಹಾಕಾವ್ಯ ಬರೆದು ಸುದ್ಧಮಕ್ಕುಂ" (ಖರನಾಮ ಸಂವತ್ಸರ)[65]

"ಮೈಸಾಳ ಶ್ರೀ ಪಾರಿಶ್ವನಾಥನ ದಿವ್ಯಚೈತ್ಯಾಲಯದಲ್ಲಿ ಪ್ರಾಭೃತಸಾರ ಪರ ಮಾಗಮವು" (ಪಾರ್ಥಿವನಾಮ ಸಂವತ್ಸರ)[66]

"ಬೆಳ್ಗುಳ ಮಠದ ಬಸ್ತಿ ಚಂದ್ರಸ್ವಾಮಿ ಸನ್ನಿಧಿಯಲ್ಲು ಚಂದ್ರಸಾಗರವರ್ಣಿ ಯವರು ಪ್ರರೂಪಣೆ ಬರದು ಸಂಪೂರ್ಣವಾಯ್ತು" (ಶಕ ೧೭೮೨)[67]

"ತೇರಿದಾಳದ ನೇಮಿತೀರ್ಥೇಶ್ವರ ಸನ್ನಿಧಿಯಲ್ಲಿ ಇತಿ ವಿಂಶತಿಪ್ರರೂಪಣೆ ಬರದು ಮುಗಿದಿತು" (ಶಕ ೧೭೧೪)[68]

---

59 ಕಾಪ್ರ. ೨೪೬/೨ 60 ಕಾಪ್ರ. ೨೭/೧ 61 ಕಾಪ್ರ. ೩೪/೧ 62 ಕಾಪ್ರ. ೨೭೦/೨ 63 ಕಾಪ್ರ. ೧೭೭/೭ 64 ಕಾಪ್ರ. ೩೪/೩ 65 ಕಾಪ್ರ. ೧೫೭/೧ 66 ಕಾಪ್ರ. ೨೮೭ 67 ಕಾಪ್ರ. ೬/೧ 68 ಕಾಪ್ರ. ೨೯೭/೪

"ವಡಗಾವಿ ಚೈತ್ಯಾಲಯದಲ್ಲಿ ಶ್ರೀಶಾಂತಿನಾಥನ ಚೈತ್ಯಾಲಯದಲ್ಲಿ ಪರಮಾತ್ಮ ಪ್ರಕಾಶಗ್ರಂಥ ಗುಮ್ಮಣನು ಸ್ವಹಸ್ತದಲಿ ಬರೆದು ಮುಗಿಸಿದನು" (ಶ ೧೨೩೮)[69]

"ಪೆನುಗೊಂಡೆಯ ಪಟ್ಟದ ಪಾರ್ಶ್ವನಾಥನ ಚೈತ್ಯಾಲಯದಲ್ಲಿ . . . ." (ಶ ೧೫೪೨, ಪಂಚಪರಮೇಷ್ಠಿಗಳ ಬೊಲ್ಲಿ)[70]

"ಶ್ರೀ ಶಾಡಬಾಳ ಶ್ರೀ ಶಾಂತಿನಾಥನ ಚೈತ್ಯಾಲಯದಲ್ಲಿ ಪರಮಾತ್ಮ ಪ್ರಕಾ ಸಮಾಪ್ತಂ"[71]

"ಮಲೆಯೂರ ಶ್ರೀಮದ್ವಿಜೆಯ ಪಾರ್ಶ್ವನಾಥಸ್ವಾಮಿಯ ಪಾದದ ಸನ್ನಿಧಿ ಯಲ್ಲಿ ರತ್ನಕರಂಡಕ ಬರೆದು ಸಮಾಪ್ತ ಮಂಗಳಮಹಾಶ್ರೀ. ಶುಭಮಸ್ತು ತೆ ಕಣಾಂಬಿಯ ಬೊಂಮರಸ್ಯೆಯನ ಬರಹ"[72]

"ಸಂಗೀತಪುರದ ಮೇಗಣಬಸ್ತಿಯ ಮೂಡಬಾಗಿಲ ಆನೇಗಲ್ಲಮೇಲೆ ಕುಳಿತು ಬರೆದುಕೊಟ್ಟರು" (ಶಕ ೧೫೧೧, ರತ್ನಕರಂಡಕ ಕಥೆ ಲಿಪಿಕಾರ–ಜಯಕೀರ್ತಿ ದೇವ)[73]

"ರಾಮಪುರದ ಶ್ರೀ ಅನಂತಸ್ವಾಮಿಯವರ ದಿವ್ಯ ಚೈತ್ಯಾಲಯದಲ್ಲಿ ಸಂಪೂರ್ಣ ವಾಗಿ ಬರೆದ ಶ್ರೀ ಪದ್ಮಾವತಿ ಅಮ್ಮನವರ ಚರಿತೆ" (ಶಕ ೧೬೯೫, ಲಿಪಿಕಾರ-ಜ್ಞಾನಸಾಗರವರ್ಣಿ)[74]

"ಸಂಗೀತಪುರದ ಶ್ರೀಮಜ್ಜಯಕೀರ್ತಿದೇವರುಗಳ ಅತಿ ಪ್ರೀತಿಯ ಸಿಷ್ಯರಾದ ದ್ವಿಜಕುಲದ ದುಗ್ಗರಸನ ಅನುಜನಾದ ತಮ್ಮಣನು ಆ ಗಾನಪುರದ ಅತಿ ಶೋಭಾ ಕರವಾಗಿವೊಪ್ಪುವ ಬ್ರಹ್ಮಸೆಟ್ಟಿಯ ಬಸದಿಯ ಶಾಂತಿತೀರ್ಥಂಕರ ಪಾದ ಸ್ಮರಣೆಯಂ ಮಾಡುತ್ತ ಆ ಬಸ್ತಿಯ ಕಂಬದ ಬ್ರಹ್ಮದೇವರ ಪಾದಸನ್ನಿಧಿಯಲ್ಲಿ ಕುಳಿತು . . . . . . ಬರದುಕೊಟ್ಟ" (ಧರ್ಮಪರೀಕ್ಷೆ)[75]

"ಚಾರುಕೀರ್ತಿಯವರ ಶಿಷ್ಯ ಧರ್ಮಕೀರ್ತಿವರ್ಣಿಯು ಬರದರು . . . . ." (ಶಕ ೧೭೨೮, ಚತುರಾನುಯೋಗ)[76]

ಈ ಉದಾಹರಣೆಗಳಿಂದ ಉದಗಾವಿ, ಕೌಲಿನಿ, ಸಮಡೋಳಿ, ಪೆನುಗೊಂಡೆ, ಕರವೀರಪುರ (ಕೊಲ್ಲಾಪುರ), ಶ್ರವಣಬೆಳ್ಗೊಳ, ಸದಲಗಿ, ಸಂಗೀತಪುರ,

---

69 ಕಾಪ್ರ. ೧೬ 70 ತಾಪ್ರ. ೨೫೩ 71 ಕಾಪ್ರ. ೧೨/೨ 72 ತಾಪ್ರ. ೩೧೬
73 ತಾಪ್ರ. ೨೩/೧ 74 ಕಾಪ್ರ. ೧೪೪/೩ 75 ತಾಪ್ರ. ೩೩೦ 76 ತಾಪ್ರ. ೨೫/೪

ಬೋಗೋದಿ, ಹಂಗರಿಕೆ, ಗುಮ್ಮಳಾಪುರ, ರತ್ನಗಿರಿ, ಹಂಗುಳ, ಬೇಲೂರ ಗ್ರಾಮಗಳೂ ಷಟ್ಪುರ-ಕೇಶಾಪುರ-ಕರವೀರಕ್ಷೇತ್ರ-ಬೆಳಗಾವಿ-ಆಲಂದಿ-ವೈಸಾಳ-ಪೆನುಗೊಂಡೆ-ಮಲೆಯೂರ ಪಾರಿಶ್ವನಾಥ, ಕುಬಳೆ-ಕೊಡೊಲಿ-ನಂದಾಪುರಗಳ ಆದಿನಾಥ, ಹೂವಿನಬಾಗೆ-ರಾಮಪುರದ ಅನಂತನಾಥ, ಸಾವಗಾವಿ-ಶ್ರವಣಬೆಳ್ಗೊಳದ ಚಂದ್ರನಾಥ, ವಡಗಾವಿ-ಸೇಡಬಾಳ-ಸಂಗೀತಪುರದ ಶಾಂತಿನಾಥ ಚೈತ್ಯಾಲಯಗಳೂ ಜೈನಲಿಪಿಕಾರರ ಲೇಖನಕಾರ್ಯದ ಸ್ಥಳಗಳಾಗಿದ್ದವೆಂಬುದು ತಿಳಿದುಬರುತ್ತದೆ. ಇದಲ್ಲದೆ ಸಮಂತಭದ್ರದೇವರ ಶಿಷ್ಯ ಜಾಯಣ್ಣ, ಜಯಸೇನರ ಪ್ರಶಿಷ್ಯ (ಶೀಲಾಬ್ದಿಯ ಶಿಷ್ಯ) ಆದಪ್ಪ, ಜಯಕೀರ್ತಿದೇವರ ಶಿಷ್ಯ ತಮ್ಮಣ್ಣ, ಲಕ್ಷ್ಮೀಸೇನ ಭಟ್ಟಾರಕರ ಶಿಷ್ಯ ಜ್ಞಾನಸಾಗರವರ್ಣಿ, ಅಕಲಂಕದೇವರ ಶಿಷ್ಯ ಜಯಕೀರ್ತಿ, ಪೆನುಗೊಂಡೆಯ ಲಕ್ಷ್ಮೀಸೇನಭಟ್ಟಾರಕರ ಶಿಷ್ಯ ಅಭಿನವ ಲಕ್ಷ್ಮೀದೇವ, ಅಭಿನವ ಜಿನಸೇನರ ಶಿಷ್ಯ ಆದಿವರ್ಣಿ, ಕೊಲ್ಲಾಪುರದ ಜಿನಸೇನ ಭಟ್ಟಾರಕರ ಪ್ರಶಿಷ್ಯೆ (ಗುಣಭದ್ರರ ಶಿಷ್ಯೆ) ಶಾಂತಿಮತಿಕಂತಿ, ಲಲಿತಕೀರ್ತಿ ಭಟ್ಟಾರಕರ ಶಿಷ್ಯೆ ವರ್ಧಮಾನಕ್ಕ, ಚಾರುಕೀರ್ತಿಯವರ ಶಿಷ್ಯ ಧರ್ಮಕೀರ್ತಿವರ್ಣಿ ಎಂಬ ಮಹತ್ವದ ಸಂಗತಿಗಳು ಪ್ರಕಟಗೊಳ್ಳುತ್ತವೆ.

ಲೇಖನ ಮಿತಿಯನ್ನು ಹೊಂದಿದ ಹಸ್ತಪ್ರತಿಗಳು ಗ್ರಂಥಪರಿಷ್ಕರಣಕಾರ್ಯದಲ್ಲಿ ಬಹಳಷ್ಟು ನೆರವಾಗುತ್ತವೆ. ಸಾಮಾನ್ಯವಾಗಿ ಇಂಥ ಹಸ್ತಪ್ರತಿಗಳು ಲಭಿಸುವುದು ಅತ್ಯಂತ ಕಡಿಮೆಸಂಖ್ಯೆಯಲ್ಲಿಯೇ ಎಂದು ಹೇಳಿದರೆ ತಪ್ಪಾಗಲಾರದು. ಆದರೆ ಈ ಹಸ್ತಪ್ರತಿಭಾಂಡಾರದಲ್ಲಿ ಮಾತ್ರ ಲೇಖನಮಿತಿಯುಳ್ಳ ಹಸ್ತಪ್ರತಿಗಳು ಅಧಿಕ ಸಂಖ್ಯೆಯಲ್ಲಿರುವುದು ಗೊತ್ತಾಗುತ್ತದೆ. ಅವು ಹೀಗಿರುತ್ತವೆ:

“ಶಕವರುಷ ಸಾವಿರದ ಆರನೂರ ನಾಲ್ವತ್ತೊಂಬತ್ತನೆಯ ಪ್ಲವಂಗನಾಮ ಸಂವತ್ಸರದ ಶುಕ್ಲಪಕ್ಷದ ವೈಶಾಖಮಾಸ” (ಜ್ಞಾನಭಾಸ್ಕರ ಚರಿತೆ)[77]

“ಶಕವರುಷ ಸಾವಿರದನೂರ ಎಪ್ಪತ್ತಮೂರನೇ ಪ್ರಜಾಪತಿ ಸಂವತ್ಸರದೊಳು ಶ್ರಾವಣಶುದ್ಧ ಪಾಡ್ಯದಲು ಸಮಾಪ್ತ” (ಜ್ಞಾನಭಾಸ್ಕ ರ ಚರಿತೆ [78]

“ಶಕೆ ೧೮೨೧ ವಿಕಾರಿನಾಮಸಂವತ್ಸರದ ಮಾರ್ಗಶಿರ ಬಹುಳ ಅಷ್ಟಮಿ ಸೋಮವಾರದಲ್ಲಿ ಸಂಪೂರ್ಣ” (ತತ್ವಾರ್ಥಸೂತ್ರ ಟೀಕೆ)[79]

“ಶಾಲಿವಾಹನ ಶ ವರುಷ ೧೬೩೪ನೆಯ ವರ್ತಮಾನಕ್ಕೆ ಸಂದ ನಂದನ ಸಂವತ್ಸರದ ಚೈತ್ರ ಶು. ೫ ಸೋಮವಾರ ಸೂರ್ಯೋದಯವಾದ ಮೂರನೇ ಘಳಿಗೆಯಲಿ ಸಂಪೂರ್ಣ” (ಮೋಹನ ತರಂಗಿಣಿ)[80]

77 ಕಾಪ್ರ. ೨೨೨/೮ 78 ಕಾಪ್ರ. ೨೬೦/೮ 79 ಕಾಪ್ರ. ೨೮೮ 80 ತಾಪ್ರ. ೧೫೨/೧

"ಏಕಸಪ್ತತ್ಯುಕ್ತಪ್ತ ಶತಾಧಿಕ ಸಹಸ್ರವರ್ಷ ಸೌಮ್ಯನಾಮ ಸಂವತ್ಸರ ವೈಶಾಖ ಬಹು ಅಷ್ಟಮಿ ಕುಜವಾರೇ ಗ್ರಂಥ ಸಮಾಪ್ತಿರ್ಭವತಿ" (ಆವಶ್ರ ತ್ರಿಭಂಗಿ ಟೀಕೆ)[81]

"ಶಕ ಸಾವಿರದೈನೂರರ ಅರುವತ್ತು ಮಿಕ್ಕ ಆರನೇ ವರುಷದಲ್ಲಿ ಲೆಕ್ಕ ತಾರಣ ಸಂವತ್ಸರ ಪುಷ್ಯ ಪೌರ್ನಮಿ . . . . ಗ್ರಂಥ ಸಂಪೂರ್ಣಂ" (ಗುರುವಚನಸಾರ, ಆಂ-ನಿರಂಜನ ಸಿದ್ಧ)[82]

"ಸಕೆ ೧೬೩೩ ಖರನಾಮ ಸಂವತ್ಸರ ಮಹಾಮಾಸಿ ಕೃಷ್ಣಪಕ್ಷ ದ್ವಿಜವಾರ ಪೂರ್ವಾರ್ನಕ್ಷತ್ರ ಧೃತಿನಾಮಯೋಗ . . . ." (ಚಂದನೆಯ ಚರಿತೆ, ಲಿಪಿಕಾರ-ಪೊಮ್ಮಣ್ಣ)[83]

"ಶಕ ೧೭೧೪ ಪರಿಧಾವಿನಾಮಸಂವತ್ಸರದ ಶ್ರಾವಣ ಚವತಿ ಚತುರ್ತಿ ಸೋಮವಾರದಲ್ಲಿ ಉತ್ತರಭಾದ್ರಪದದಲ್ಲಿ ಸಮಾಪ್ತಿ" (ಜಿನಮುನಿತನಯ, ಲಿಪಿಕಾರ-ಧರ್ಮಣ್ಣ)[84]

"ಸ್ವಸ್ತಿ ಶ್ರೀನೃಪ ಶಾಲಿವಾಹನಶಕೆ ೧೭೧೨ ಸಾಧಾರಣನಾಮ ಸಂವತ್ಸರೇ ಶ್ರಾವಣ ಬಹುಳ ತ್ರಯೋದಶ್ಯಾಂ ತಿಥೌ ಮಂಗಳವಾರ" (ಕ್ಷತ್ರಚೂಡಾಮಣಿ)[85]

"ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರುಷ ೧೬೮೮" (ಪದಾರ್ಥಸಾರ ಟೀಕೆ)[86]

"ಗತಕಲಿಯುಗ ೪೭೪೫. ಸಕ ಸಂವತ್ಸರ ೧೫೬೬ ತಾರಣನಾಮ ಸಂವತ್ಸರ ಅಶ್ವಿಜ ಮಾಸದ ಸುಕ್ಲಪಕ್ಷದ ಸಪ್ತಮಿ ಸುಕ್ರವಾರ" (ಧರ್ಮಪರೀಕ್ಷೆ)[87]

"ಶ್ರೀನೃಪ ಶಾಲಿವಾಹನ ಶಕ ೧೬೬೦ ಕಾಳಯುಕ್ತನಾಮಸಂವತ್ಸರ ಚಂದ್ರವಾರ ಶುಭಜಾವದಲಿ ಪ್ರತಿಸಮಾಪ್ತಿ" (ದ್ವಾದಶಾನುಪ್ರೇಕ್ಷೆ)[88]

"ಸ್ವಸ್ತಿ ಶ್ರೀನೃಪ ಶಾಲಿವಾಹನ ಶಕ ೧೭೨೦ ವರ್ಷೇ ಖಳಯಿತಾ ನಾಮ ಸಂವತ್ಸರೇ ಭಾದ್ರಪದ ಮಾಸ ಕೃಷ್ಣಪಕ್ಷೇ ರವಿವಾರ ಯುಕ್ತಾಯಾಂ ಶುಭ ನಕ್ಷತ್ರಯೋಗಕರಣಯುಕ್ತಾಯಾಂ" (ದ್ವಾದಶಾನುಪ್ರೇಕ್ಷೆ)[89]

---

81 ತಾಪ್ರ. ೬/೨ 82 ಕಾಪ್ರ. ೫೧/೬ 83 ಕಾಪ್ರ. ೧೪೮/೧ 84 ಕಾಪ್ರ. ೨೬೦/೭
85 ಕಾಪ್ರ. ೨೪೬/೨ 6 ಕಾಪ್ರ. ೨೫೩/೨ 87 ಕಾಪ್ರ. ೩೪/೧ 88 ಕಾಪ್ರ. ೧೭೭/೭
89 ಕಾಪ್ರ. ೩೪/೩

"ಶ್ರೀಮತ್ಸಕವರ್ಷ ೧೫೦೭ ಮನ್ಮಥ ಸಂವತ್ಸರದ ಮಾರ್ಗಶಿರ ಮಾಸದ ಕೃಷ್ಣ ಪಕ್ಷ ರವಿವಾರ ಅಷ್ಟಮಿಯಲ್ಲು ಮಧ್ಯಾಹ್ನಕಾಲ "(ಜ್ಞಾನಚಂದ್ರ ಕಾವ್ಯ)[90]

"ಸ್ವಸ್ತಿ ಶ್ರೀಮಚ್ಛಾಲಿವಾಹನ ಶಕ ವರ್ಷ ೧೭೭೨ನೆಯ ವರ್ತಮಾನ ಸಾಧಾರಣ ಸಂವತ್ಸರದ ಭಾದ್ರಪದ ಮಾಸ ಬಹುಳ ೧೨ಯು ಬುಧವಾರದಲು" (ವಿಂಶತಿ ಪ್ರರೂಪಣೆ ಟೀಕೆ)[91]

"ಶಕೆ ೧೭೧೪ ವರ್ಷೇ ಪ್ರವರ್ತಮಾನೇ ಪರಿಧಾವಿನಾಮ ಸಂವತ್ಸರೇ ಆಶ್ವಿಜ ಮಾಸೇ ಶುಕ್ಲಪಕ್ಷೇ ೧೧ ಏಕಾದಶಿ ತಿಥೌ ಬುಧವಾರಯುಕ್ತಾಯಾಂ ಶ್ರವಣಾ ನಕ್ಷತ್ರೇ ಸುಕರ್ಮನಾಮಯೋಗೇ ವಣಜಾಕರಣೇ ತ್ರಿತಯ ಪ್ರಹರೇ ಕುಂಭ ಲಗ್ನೇ ಅಮೃತವೇಳೇಷಡ್ವರ್ಗ ಶುದ್ಧಿ ಏವಂ ಪಂಚಾಂಗ ಶುದ್ಧಿ" (ವಿಂಶತಿ ಪ್ರರೂಪಣೆ ಟೀಕೆ)[92]

" ಶಾಲಿವಾಹನಶಕ ೧೭೩೮ ವರ್ಷೇ ಧಾತುನಾಮ ಸಂವತ್ಸರೇ ಫಾಲ್ಗುಣ ವದ್ಯೇ ಸಪ್ತಮಿ ರವಿವಾರೇ ಅನುರಾಧ ನಕ್ಷತ್ರ ವಜ್ರನಾಮಯೋಗ ಸ್ವಕುನಿಕರಣ ಸಿಂಹ ಲಗ್ನ " (ಪರಮಾತ್ಮಪ್ರಕಾಶ ಟೀಕೆ, ಲಿಪಿಕಾರ-ಗುಮ್ಮಣ)[93]

" ಶಕ ೧೮೦೩ ವಿಷುನಾಮ ಸಂವತ್ಸರೇ " (ನವನಿಧಿ ಸ್ವರೂಪ, ಲಿಪಿಕಾರ— ಬೊಮ್ಮಣ್ಣ ಉಪಾಧ್ಯೆ)[94]

" ಸ್ವಸ್ತಿಶ್ರೀ ಸಾಲಿವಾಹನ ಸಕಕಾಲ ೧೫೩೧ನೆಯ ವರ್ತಮಾನ ಕೀಲಕ ಸಂವತ್ಸರದ ಮಾರ್ಗಸಿರ ಬಹುಳ ಪಾಡ್ಯ ಸೋಮವಾರ " (ಶ್ರೀಪಾಲಚರಿತೆ)[95]

"ಸ್ವಸ್ತಿ ಶ್ರೀನೃಪ ಶಾಲಿವಾಹನಶಕ ೧೬೯೨ ವರ್ಷೇ ವಿಕೃತನಾಮಸಂವತ್ಸರೇ ಮಾಘಮಾಸದ ಕೃಷ್ಣಪಕ್ಷದ ದ್ವಾದಶಿ ದಿವಸೇ ಚಂದ್ರವಾರೇ ಪೂರ್ವಾಷಾಢ ನಕ್ಷತ್ರೇ ಸಿದ್ಧಿನಾಮಯೋಗೇ ತೈತುಲಾಕರಣಂ ಸಿಂಹಲಗ್ನೇ ತೃತೀಯ ಪ್ರಹರೇ ಶಿಶಿರ ಋತು ಉತ್ತರಾಯಣೇ " (ಆಚಾರಸಾರ ಟೀಕೆ, ಲಿಪಿಕಾರ– ಪಾಯಪ್ಪ)[96]

"ಶಕವರ್ಷ ೧೭೬೭ನೆಯ ವಿಶ್ವಾವಸುನಾಮ ಸಂವತ್ಸರದ ಆಷಾಢ ಬಹುಳ ೭ ಸಪ್ತಮಿ ಶುಕ್ರವಾರ " (ದ್ವಾದಶಾನುಪ್ರೇಕ್ಷೆ) [97]

---

90 ಕಾಪ್ರ. ೬೭/೫ 91 ತಾಪ್ರ. ೩/೧ 92 ಕಾಪ್ರ. ೨೪೭/೪ 93 ಕಾಪ್ರ. ೧೬
94 ಕಾಪ್ರ. ೨೩೧/೬ 95 ತಾಪ್ರ. ೧೯೩ 96 ಕಾಪ್ರ. ೩೯ 97 ತಾಪ್ರ. ೩೨೨

"ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದ ೧೬೮೮ ಶಕೇ ೩ ವರ್ಷೇ ಅಂಗೀರಸನಾಮಸಂವತ್ಸರೇ ಕಾರ್ತಿಕ ಮಾಸೇ ಪ್ರತಿಪದದಲ್ಲಿ ಜ್ಞಾ ಚಂದ್ರಕಾವ್ಯ ಸಮಾಪ್ತ ಮಂಗಳಮಹಾಶ್ರೀ "[98]

"ಶಕ ೧೬೩೭ ವರುಷ ಖರನಾಮ ಸಂವತ್ಸರೇ ಭಾದ್ರಪದ ಮಾಸೇ ಕೃಷ್ಣಪ ವದ್ಯ ದ್ವಾದಶಿ ತಿಥೌ ಗುರುವಾರ ಯುಕ್ತಾಯಾಂ ಉದಯಕಾಲೇ ವ ಕುಮಾರ ಚರಿತೆ ಸಮಾಪ್ತ "[99]

"ಸಕೆ ೧೬೮೨ ವಿಕ್ರಮನಾಮ ಸಂವತ್ಸರದ ಪುಷ್ಯ ವದ್ಯ ೬ ಷೇಟಿ ಸೋಮವಾ ದಿನಕೆ ಪ್ರಾಭೃತಸಾರ ಬರದಿರಲು "[100]

"ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರ್ಷ ೧೭೬೧ ವಿಭವ ಸಂ. ಮಾರ್ಗ ಶು. ೧೫" (ಷೋಡಶ ಕ್ರಿಯಾಮಂಜರಿ)[101]

"ಶಕ ೧೬೭೭ ಪ್ಲವನಾಮ ಸಂವತ್ಸರ ಚೈತ್ರಮಾಸದ ಶುಭ ಮುಹೂರ್ತದಲ್ಲಿ ಆರಾಧನಾಸಾರ ತೀರ್ದು "[102]

"ಶಕವರ್ಷ ಸಾವಿರದ ನಾನೂರೆಂಬತ್ತೆರಡನೆಯ ಸಿದ್ಧಾರ್ಥ ಸಿದ್ಧೀಸಂವತ್ಸರದ ಭಾದ್ರಪದ ಶುದ್ಧ ದಶಮಿಯೊಳಿರದೆ ಈ ಚರಿತ ಸಂಪೂರ್ಣ " (ಸುವಿಚಾರ ಚರಿತೆ)[103]

"ಶ್ರೀನೃಪ ಶಾಲಿವಾಹನ ಸಕೆ ೧೭೫೭ ವರ್ಷದ ಮನ್ಮಥನಾಮ ಸಂವತ್ಸರದ ದಕ್ಷಿಣಾಯನ ವರ್ಷರುತು ಭಾದ್ರಪದಮಾಸ ಬಹುಳ ೮ ಅಷ್ಟಮಿ ಭೌಮವಾರ ಮೃಗಾ ನಕ್ಷತ್ರದಲ್ಲಿ ದ್ವಿತೀಯ ಪ್ರಹರ ವೃಶ್ಚಿಕ ಲಗ್ನದಲ್ಲಿ" (ದ್ವಾದಶಾನು ಪ್ರೇಕ್ಷೆ, ಲಿಪಿಕಾರ–ಧರ್ಮಣ್ಣ)[104]

"ಶಕೆ ೧೮೩೧ ಅಶ್ವಿಜ ವದ್ಯ ೫ " (ಶ್ರಾವಕಾಚಾರ ವೃತ್ತಿ, ಲಿಪಿಕಾರ–ನೇಮೇಶ ಉಪಾಧ್ಯಾಯ)[105]

"ಸ್ವಸ್ತಿ ಶ್ರೀನೃಪ ಶಾಲಿವಾಹನ ಶಕೆ ೧೬೧೭ ವರ್ಷೇ ರಾಕ್ಷಸನಾಮ ಸಂವಂತ್ಸರೇ ಪೌಷ್ಯವದ್ಯೇ ಪಂಚಮೀ ಭೃಗುವಾರೇ ಹಸ್ತಾನಕ್ಷತ್ರೇ ೩೮ ಸುಕರ್ಮನಾಯೋಗೇ

---

98 ಕಾಪ್ರ. ೧೫೭/೧ 99 ಕಾಪ್ರ. ೨೩೬/೧ 100 ಕಾಪ್ರ. ೧೭/೨ 101 ತಾಪ್ರ. ೩೦೯
102 ಕಾಪ್ರ. ೨೭/೪ 103 ಕಾಪ್ರ. ೪೧/೩ 104 ಕಾಪ್ರ. ೩೫ 105 ಕಾಪ್ರ. ೪೨/೨

೩೮ ತೈತುಲಾಕರಣೇ ೧೪ ಚಂದ್ರ ೧೮ ಪ್ರಥಮ ಪ್ರಹರೇ . . . . ಬರದು ಮುಗಿಯಿತು" (ಪೂರ್ವಪುರಾಣ, ಲಿಪಿಕಾರ-ನೇಮಣ್ಣ)[106]

"ಶಾಲಿವಾಹನ ಸಕೆ ೧೬೮೨ ವಿಕ್ರಮನಾಮ ಸಂವಥರ ಫಾಲ್ಗುಣಮಾಸೇ ಕೃಷ್ಣ ಪಕ್ಷೇ ಆದ್ಯಾಂ ತಿತೌ ೫ ಪಂಚಮಿಯಾಂ ತಿತೌ ಸೋಮವಾರ" (ಸಮಯ ಸಾರ ಪ್ರಾಭೃತ ಟೀಕೆ, ಲಿಪಿಕಾರ-ಗಂಗಸೆಟ್ಟಿ)[107]

"ಸಾಲಿವಾಹನ ಸಕೆ ೧೬೮೩ ವಿಶ್ವ(ಶು)ನಾಮಸಂವತ್ಸರ ಚೈತ್ರಮಾಸೇ ಶುಕ್ಲ ಪಕ್ಷೇ ಆದ್ಯಾಂ ತಿತೌ ೫ ಪಂಚಮಿಯಾಂ ತಿತೌ ಗುರುವಾರ" (ರತ್ನಕರಂಡಕ ವ್ಯಾಖ್ಯಾನ, ಲಿಪಿಕಾರ-ಗಂಗಣ್ಣ)[108]

"ಸಕವರ್ಷ ೧೫೮೯ನೆಯ ಪ್ಲವಂಗ ಸಂವತ್ಸರದ ಆಶ್ವಿಜ" (ಕರ್ಮಪ್ರಕೃತಿ ವ್ಯಾಖ್ಯಾನ, ಲಿಪಿಕಾರ-ಪಾಯಣ್ಣ)[109]

"ಶಾಲಿವಾಹನಶಕ ವರ್ಷ ೧೬೬೪ನೆಯ ರುಧಿರೋದ್ಗಾರಿನಾಮ ಸಂವತ್ಸರದ ಚೈತ್ರಬಹುಳ ೫ ಚಂದ್ರವಾರ" (ನಾಗಕುಮಾರ ಚರಿತ, ಲಿಪಿಕಾರ-ಬ್ರಹ್ಮಯ್ಯ)[110]

"ಸ್ವಸ್ತಿಶ್ರೀ ಮತ್ಸಕವರ್ಷ ೧೫೦೬ ಮನ್ಮಥ ಸಂವತ್ಸರ" (ದ್ವಾದಶಾನುಪ್ರೇಕ್ಷೆ, ಲಿಪಿಕಾರ-ಜಾಯಣ್ಣ)[111]

"ಸಖವರುಷ ೧೫೪೨ನೆಯ ರೌದ್ರಿಸಂವತ್ಸರದ ಮಾಘ ಸು. ೧೦" (ಪಂಚ ಪರಮೇಷ್ಠಿಗಳ ಬೊಲ್ಲಿ, ಲಿಪಿಕಾರ್ತಿ-ಶಾಂತಿಮತಿ)[112]

"ಸಕವರುಷ ೧೫೧೧ ಸಂದ ಸರ್ವಧಾರಿ ಸಂವತ್ಸರದ ಪುಷ್ಯ ಬಹುಳ ೧೩ಯು ಶನಿವಾರ" (ರತ್ನಕರಂಡಕದ ಕಥೆ, ಲಿಪಿಕಾರ—ಜಯಕೀರ್ತಿದೇವ)[113]

"ಶ್ರೀ ನೃಪ ಶಾಲಿವಾಹನ ಶಕೆ ೧೬೮೮ನೆಯ ವ್ಯಯನಾಮ ಸಂವತ್ಸರ" (ರಾಮಚಂದ್ರ, ಚರಿತಪುರಾಣ, ಲಿಪಿಕಾರ-ಆದಿವರ್ಣಿ)[114]

"ವಿಜಯಾಭ್ಯುದಯ ಶಾಲಿವಾಹನ ಶಕಾಬ್ದಃ ೧೬೯೫ ವಿಜಯನಾಮ ಸಂವತ್ಸರದ ಕಾರ್ತಿಕ ಶುದ್ಧ ೧ ವು ಮಂದವಾರದ ಶುಭತಿಥಿ" (ಪದ್ಮಾವತಿ ಚರಿತೆ, ಲಿಪಿಕಾರ—ಜ್ಞಾನಸಾಗರವರ್ಣಿ)[115]

---

106 ಪೂರ್ವಪುರಾಣಂ, ಪೀಠಿಕೆ-ಪುಟ ೧೯ 107 ಕಾಪ್ರ. ೧೭/೫ 108 ಕಾಪ್ರ. ೧೭/೬ 109 ತಾಪ್ರ. ೨೧ 110 ತಾಪ್ರ. ೧೪೧ 111 ಕಾಪ್ರ. ೬೭/೪ 112 ತಾಪ್ರ. ೨೫೩ 13 ತಾಪ್ರ. ೨೩/೧ 114 ಕಾಪ್ರ. ೧೪೩ 115 ಕಾಪ್ರ. ೧೪೪/೩

"ಶಕವರ್ಷ ೧೭೩೫ನೆಯ ಸಂವತ್ಸರದ ಪುಷ್ಯ ಬ. ೧೨" (ಚತುರಾನುಯೋ ಲಿಪಿಕಾರ—ಧರ್ಮಕೀರ್ತಿವರ್ಣಿ)[116]

"ಶಾಲಿವಾಹನ ಶಕವರುಷ ೧೯೫ಕ್ಕಂ ಶೋಭನನಾಮ ಸಂವತ್ಸರದ ಶ್ರಾವಣ ಮಾಸ ಶುಕ್ಲಪಕ್ಷದ ಪಂಚಮಿ ಸ್ತಿರವಾರ" (ನೇಮಿಜಿನೇಶ ಸಂಗತಿ, ಲಿಪಿಕಾರ ಬ್ರಹ್ಮಯ್ಯ)[117]

"ಸ್ವಸ್ತಿಶ್ರೀ ಮಚ್ಛಕವರುಷ ೧೪೫೧ನೆಯ ಸರ್ವಧಾರಿ ಸಂವತ್ಸರದ ಶ್ರಾವಣ ಶು. ೭ಯೂ ಗುರುವಾರ ಸ್ವಾತಿ ನಕ್ಷತ್ರದಲ್ಲಿ ಧರ್ಮಾಮೃತವು ಬರೆದ ಸಂಪೂರ್ಣವಾಯಿತ್ತು" (ಲಿಪಿಕಾರ—ದೊಡ್ಡತಮ್ಮ)[118]

"ಶಕಕರುಷ ೧೬೩೪ನೆಯ ನಂದನನಾಮ ಸಂವತ್ಸರದ ಚೈತ್ರ ಶುದ್ಧ ೧ ಬಹುಳ" (ನಾಗಕುಮಾರ ಚರಿತೆ, ಲಿಪಿಕಾರ—ಜವನಪ್ಪ)[119]

"ಶಾಲಿವಾಹನ ಶಕವರ್ಷ ಸಾವಿರದ ಅಯ್ನೂಱು ಮೂವತ್ತ ಮೂಱು(೧೫೩೩) ನೆಯಲ್ಲಿ" (ಸೂಕ್ತಿಮುಕ್ತಾವಳಿ ಟೀಕೆ, ಲಿಪಿಕಾರ—ಚೆನ್ನಮಲ್ಲ)[120]

"ಸ್ವಸ್ತಿಶ್ರೀ ಶಕವರುಷ ೧೪೨೭ ಸಂದ ವರ್ತಮಾನವಾದ ಕ್ರೋಧನಸಂವತ್ಸರದ ಭಾದ್ರಪದ ಶು. ೧೦ ರವಿವಾರ ಉತ್ತರಾಷಾಢ ನಕ್ಷತ್ರ ಶೋಭನಯೋಗ" (ಚಾವುಂಡರಾಯಪುರಾಣ, ಲಿಪಿಕಾರ—ಮುನಿಯಪ್ಪ)[121]

"ಸ್ವಸ್ತಿಶ್ರೀ ಸಾಲಿವಾಹನ ಸಕಕಾಲ ೧೫೩೧ನೆಯ ವರ್ತಮಾನ ಕೀಲಕ ಸಂವತ್ಸರದ ಮಾರ್ಗಸಿರ ಬಹುಳ ಪಾಡ್ಯವು ಸೋಮವಾರ (ಶ್ರೀಪಾಲಚರಿತ)[122]

"ಪ್ಲವಂಗನಾಮ ಸಂವತ್ಸರದ ಅಧಿಕಮಾಸ ಕೃಷ್ಣ ಚತುರ್ದಶಿಯಲ್ಲಿ ಅಮರ ಸಿಂಹ ಕನ್ನಡವ್ಯಾಖ್ಯಾನ ಬರೆದು ಸಂಪೂರ್ಣಮಕ್ಕು ಮಂಗಳಂಭೂಯಾತ್"[123]

"ಸಾರ್ವರಿ ಸಂವತ್ಸರದ ಶ್ರಾವಣಶುದ್ಧ ಚತುರ್ದಶಿಯ ಮಂಗಳವಾರ ಬರದುದು" (ಜಿನಮುನಿತನಯ)[124]

"ಶಾರ್ವರಿ ಸಂವತ್ಸರದ ವೈಶಾಖ ಶುದ್ಧ ೧೪ ದಿವಸಕ್ಕೆ ಸಂಪೂರ್ಣಂ" (ತತ್ವಾರ್ಥಸೂತ್ರ ಟೀಕೆ)[125]

---

116 ತಾಪ್ರ. ೨೫/೪ 117 ತಾಪ್ರ. ೧೩೨ 118 ತಾಪ್ರ. ೨೨೮ 119 ತಾಪ್ರ. ೧೪೨
120 ತಾಪ್ರ. ೧೭೭/೨ 121 ತಾಪ್ರ. ೧೪೪ 122 ತಾಪ್ರ. ೧೯೬ 123 ಕಾಪ್ರ. ೮೫
124 ತಾಪ್ರ. ೫೨೪ 125 ತಾಪ್ರ. ೭

"ವಿರೋಧಿಕೃತ ಸಂವತ್ಸರದ ಪುಷ್ಯಮಾಸದ ಕೃಷ್ಣಪಕ್ಷದ ಎಳ್ಳ ಅಮಾವಾಸಿ ವಾರ ಸೋಮವಾರದ ರಾತ್ರಿ ಎರಡು ಜಾವದಲಿ ಬರದು ಮುಗಿದ" (ಧರ್ಮ ಪರೀಕ್ಷೆ)[126]

"ಪರಾಭವ ಸಂವತ್ಸರದ ಆಶಾಢ ಬ.೧೦ ಶುಕ್ರವಾರದಲ್ಲಿಗೆ ಬರೆದು ಮುಗಿಯಿತು" (ಪುಣ್ಯಾಶ್ರವ)[127]

"ಈ ಗತಿಗಳಿಪ್ಪತ್ತೈದದು | ಯೋಗಕರ ವಿಶುದ್ಧ ಪಕ್ಷದ ನಾಗಪಂಚಮಿ ಆದಿವಾರದೊಳಗೆ ಮಾಡಿದೆನು "(ಪ್ರಭುಲಿಂಗಲೀಲೆ)[128]

"ಪ್ಲವಸಂವತ್ಸರದ ಕಾರ್ತಿಕ ಶುದ್ಧ ೧ ಶುಕ್ರವಾರ" (ವಡ್ಡಾರಾಧನೆ, ಲಿಪಿಕಾರ—ಬೇಲೂರ ವೈಶ್ಯ ಚಂದ್ರಯ್ಯ)[129]

"ಭಾವನಾಮ ಸಂವತ್ಸರದ ಮಾಘಮಾಸದ ಕೃಷ್ಣಪಕ್ಷದ ಚವುತಿಯಲ್ಲಿ ಉತ್ತರಾನಕ್ಷತ್ರದಲ್ಲಿ ಸುಕರ್ಮಯೋಗ ಶುಕ್ರವಾರ ಉದಯದಲ್ಲಿ" (ಪಂಚಾಸ್ತಿಕಾಯ ಪ್ರಾಭೃತವ್ಯಾಖ್ಯಾನ)[130]

"ರುಧಿರೋದ್ಗಾರಿ ಸಂವತ್ಸರದ ಆಶ್ವಿಜ ಶುದ್ಧ ೧೫ ಚಂದ್ರವಾರ" (ಧನಂಜಯ ನಿಘಂಟು ಟೀಕೆ)[131]

"ಖರನಾಮ ಸಂವತ್ಸರ ಫಾಲ್ಗುಣ ಮಾಸದ ಕೃಷ್ಣಪಕ್ಷ ಸಪ್ತಮಿ ಕುಜವಾರ ಶುಭ ಮುಹೂರ್ತ ಶುಭಯೋಗ ಶುಭ ವ್ಯಾಳೆದಲು" (ಜ್ಞಾನಚಂದ್ರಕಾವ್ಯ)[132]

"ಪಾರ್ಥಿವನಾಮ ಸಂವತ್ಸರದಲ್ಲಿ | ಶ್ರಾವಣಶುದ್ಧದಲ್ಲಿ | ಪಾಡ್ಯಮ್ಯಾಂ ತಿಥೌ | ಗುರುವಾರ ಯುಕ್ತಾಯಾಂ | ರೇವತಿ ನಕ್ಷತ್ರಾನಾಂ | ಪ್ರೀತಿನಾಮ ಯೋಗಾನಾಂ | ಆಯುಷ್ಯ ಕರಣಾನಾಂ | ಆಶ್ಲೇಷ ಮಹಾನಕ್ಷತ್ರಾಯಾಂ | ಕರ್ಕ ಮಹಾಲಗ್ನಾಯಾಂ" (ಸಮಯಸಾರ ಪ್ರಾಭೃತ ಟೀಕೆ)[133]

"ಶೋಭನಕೃತ ಸಂವತ್ಸರದ ಮಾರ್ಗಶಿರ ಬ.೫ ಸ್ಥಿರವಾರ ಸೂರ್ಯೋದಯವಾದ ಗಳಿಗೆ ಮೂರರಲ್ಲಿ ಶಂಖಜಿನೇಶ್ವರರುದ್ಭವಿಸಿದ ಕಥಾಪ್ರಸಂಗ ಬರದು ಸಮಾಪ್ತಿ"[134]

"ಯಿವ ಸಂವಚರದ ಚತುರಮಾಸದ ಆಶ್ವೀಜಯದ ಜೀವದಷ್ಟಮಿ ದಿನ ಮುಗಿಯಿತು" (ಪಂಚಪರಮೇಷ್ಠಿಗಳಬೊಲ್ಲಿ, ಲಿಪಿಕಾರ–ಹಿರಿಯ ಜಯಣ್ಣ)[135]

---

126 ಕಾಪ್ರ. ೬೭/೭ 127 ತಾಪ್ರ. ೩೯೪/೧ 128 ಕಾಪ್ರ. ೧೦೦/೩ 129 ತಾಪ್ರ. ೪೫ 130 ಕಾಪ್ರ. ೨೭/೧ 131 ಕಾಪ್ರ. ೨೭೦/೧ 132 ಕಾಪ್ರ. ೧೫೭/೧ 133 ಕಾಪ್ರ. ೩೮೭ 134 ತಾಪ್ರ. ೧೪೭/೪ 135 ಕಾಪ್ರ. ೪೬/೪

"ಆಂಗೀರಸನಾಮ ಸಂವತ್ಸರದ ಶ್ರಾವಣ ಶುದ್ಧ ದಶಮಿ ಶುಕ್ರವಾರ" (ಪದ್ಮಾವತಿ ಚರಿತೆ)[136]

"ಮನ್ಮಥ ಸಂವತ್ಸರದ ಮಾರ್ಗಶಿರ ಶು. ೧೦ ಇಂದುವಾರ" ಜೀವ ಸಂಬೋಧನೆ)[137]

"ಈಶ್ವರ ಸಂವತ್ಸರದ ಆಷಾಢ ಶು. ೧೦ ವಿಯಲು ಭೇಷಜಕಲ್ಪ ಸಮಾಪ್ತ"[138]

"ಶೋಭನಕೃತು ಸಂವತ್ಸರದ ಪುಷ್ಯ ಶುದ್ಧ ಸ್ಥಿರವಾರ ಸುದರ್ಶನ ಚರಿತೆ ಬರದ ಸಂಪೂರ್ಣ ಮಂಗಳ ಮಹಾಶ್ರೀ"[139]

"ಪ್ರಮಾದಿತ ಸಂವತ್ಸರದ ವೈಶಾಖ ಬ. ೭ ಗುರುವಾರದಲೂ ಸೂಕ್ತಿ ಮುಕ್ತಾವಲಿ . . . . . ಶ್ರೀ ಶ್ರೀ ಶ್ರೀ"[140]

"ವಿಭವ ಸಂವಥರದ ಸೀಗಿಹುಣ್ಣಿವಿಯ ಪಡೆದಲಿ ಸಂಪೂರ್ಣ ಆಯಿತು" (ಬಿಜ್ಜಣಚರಿತೆ, ಲಿಪಿಕಾರ-ಜಯಣ್ಣ)[141]

"ವ್ಯಯನಾಮ ಸಂ. ಕಾಳಯುಕ್ತಿನಾಮ ಸಂವತ್ಸರದ ಭಾದ್ರಪದ ಮಾಸದ ವದ್ಯ ಚತುರ್ದಶಿಯುಲ್ಲಿ ಮಘಾನಕ್ಷತ್ರದಲ್ಲಿ ಶುಕ್ರವಾರದಲ್ಲಿ ಸಕುನಿ ಕರಣದಲ್ಲಿ ಸಾಧ್ಯೇ ಯೋಗದಲ್ಲಿ ಅಮೃತ ವೇಳೆಯಲ್ಲಿ" (ಕೌಮುದಿ ಕಥೆ, ಲಿಪಿಕಾರ-ಅಂತಪ್ಪ)[142]

"ರಕ್ತಾಕ್ಷಿ ಸಂವತ್ಸರದ ಚೈತ್ರ ಬಹುಳ ೧೦" (ಪದ್ಮಾವತಿ ಚರಿತೆ, ಲಿಪಿಕಾರ್ತಿ ಕಾಳವ್ವೆ)[143]

"ವಿಕ್ರಮನಾಮ ಸಂವತ್ಸರದ ಫಾಲ್ಗುಣ ಮಾಸ ಬಹುಳ ದಶಮಿ" (ರತ್ನ ಕರಂಡಕ ಶ್ರಾವಕಾಚಾರ ವ್ಯಾಖ್ಯಾನ, ಲಿಪಿಕಾರ್ತಿ-ಪಾರ್ಶ್ವಮತಿಬಾಯಿ)[144]

"ವಿರೋಧಿ ಸಂವತ್ಸರದ ಕಾರ್ತಿಕಶುದ್ಧ ೧ ಬುಧವಾರ" (ಪಂಚಪರಮೇಷ್ಠಿಗಳ ಬೊಲ್ಲಿ, ಲಿಪಿಕಾರ-ಚಿಕ್ಕಲಕ್ಷ್ಮೀಸೇನದೇವ)[145]

"ಪ್ಲವಸಂವತ್ಸರದ ಕಾರ್ತಿಕಮಾಸದ ಸಪ್ತಮಿ ಬುಧವಾರದಲ್ಲು ಬರದ ಯಶೋಧರ ಚರಿತೆಗೆ ಮಂಗಳಮಹಾಶ್ರೀ"[146]

---

136 ತಾಪ್ರ. ೨೯೭ 137 ತಾಪ್ರ. ೧೩/೧ 138 ತಾಪ್ರ. ೨೫೪/೧ 139 ತಾಪ್ರ. ೧೪೭/೫ 140 ತಾಪ್ರ. ೬೧ 141 ಕಾಪ್ರ. ೩೬/೧ 142 ಕಾಪ್ರ. ೨೬೫/೧ 143 ತಾಪ್ರ. ೨೦೭ 144 ಕಾಪ್ರ. ೧೮೩ 145 ತಾಪ್ರ. ೨೧೦/೧ 146 ತಾಪ್ರ. ೨೧೬/೧

"ಸಾಧಾರಣ ಸಂವತ್ಸರದ ಆಶಾಢ ಬಹುಳ ೧೧ ಶುಕ್ರವಾರ ದಿನಕ್ಕೆ ಧರ್ಮಾಮೃತ ಪುರಾಣವನು ಚಂದ್ರಯನು ಬರೆದನು"[147]

"ವಿರೋಧಿ ಸಂವತ್ಸರದ ಜ್ಯೇಷ್ಠ ಬ. ೫ವು ಜಯಮುನಿ ಪುಸ್ತಕ ಬರ(ಹ)ವು" (ಲಿಪಿಕಾರ-ವಾಪ್ಪೈಯ್ಯ)[148]

"ಮನ್ಮಥ ಸಂವತ್ಸರದ ಮಾರ್ಗಶಿರ ಶು. ೧೦ ಇಂದುವಾರ" (ಜೀವ ಸಂಬೋಧನೆ)[149]

"ಆಂಗೀರಸನಾಮ ಸಂವತ್ಸರದ ಶ್ರಾವಣಶುದ್ಧ ದಶಮಿ ಶುಕ್ರವಾರ" (ಪದ್ಮಾವತಿ ಚರಿತೆ)[150]

"ಕ್ರೋಧನ ಸಂವತ್ಸರದ ಮಾಘಮಾಸ ಶುದ್ಧ ಪಂಚಮಿದಿನ ಶುಕ್ರವಾರ ನಕ್ಷತ್ರ ಅಶ್ವಿನಿ ಸಿದ್ಧನಾಮಯೋಗವು ವಜಾಕರಣ ಯೋಗದಲ್ಲಿ ಮುಗಿದುದು" (ನೇಮಿ ಜಿನೇಸಸಂಗತಿ, ಲಿಪಿಕಾರ-ಜಿನ್ನಪ್ಪ)[151]

ಲೇಖನಮಿತಿಯಿರುವ ಈ ಹಸ್ತಪ್ರತಿಗಳು ಲಿಪಿಕಾರರ ಕಾಲದ ಭಾಷಾಸ್ವರೂಪ ಹಾಗೂ ಲಿಪಿಸ್ವರೂಪಗಳನ್ನು ನಮಗೆ ಪರಿಚಯಿಸಿ ಕೊಡುತ್ತವೆ. ಇದರಿಂದ ಕವಿಪಾತ ನಿರ್ಣಯಕಾರ್ಯ ಮಾಡಲು ಅತ್ಯಂತ ಸುಲಭವಾಗುತ್ತದೆ.

ಹಸ್ತಪ್ರತಿಗಳನ್ನು ಪ್ರತಿಮಾಡಿಸುವ ಪುಣ್ಯಕಾರ್ಯಕ್ಕೆ ಪ್ರಮುಖ ಪ್ರೇರಣೆ, ಜೈನಧರ್ಮದ ಶಾಸ್ತ್ರದಾನ. ಇದರಿಂದ ಜೈನ ಹಸ್ತಪ್ರತಿಗಳನ್ನು ಬರೆಯಿಸುವವರ ಮತ್ತು ಬರೆವವರ ಸಂಖ್ಯೆ ಸಂವರ್ಧಿಸಲು ಸಾಧ್ಯವಾಯಿತು. ಈ ಪರಮ ಪುಣ್ಯ ಕಾರ್ಯದಲ್ಲಿ ಪಾಲ್ಗೊಂಡವರ ಉದಾಹರಣೆಗಳು ಹೀಗಿವೆ:

"ಬೆಳ್ಗುಳದ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯವರ್ಯ ಸ್ವಾಮಿಯವರ ಪಾದ ಪದ್ಮಂಗಳಿಗೆ ಭೃಂಗೋಪಮಾನಿಗಳಾದ ಶ್ರೀ ಅರಮನೆ ಬಸಂಮನವರು ಜ್ಞಾನೋಪಕರಣಾಭ್ಯುದಯ ನಿಮಿತ್ತವಾಗಿಯು ಸದಾಧ್ಯಯನ ನಿಮಿತ್ತ ವಾಗಿಯೂ ಶ್ರೀ ಬೆಳ್ಗುಳದಯಿಂದ್ರವರ್ಗದ ವಶಿಷ್ಟಗೋತ್ರಜ್ಞನಾದ ವಿಜ ಯಂಣೋಪಾಧ್ಯಾಯರ ಹಸ್ತತಲದಲ್ಲಿ ಬರೆಯಿಸಿದ ಈ ದ್ವಾದಶಾನುಪ್ರೇಕ್ಷೆಗೆ ಭದ್ರಂ ಭೂಯಾತ್" (ಶಕ ೧೭೬೭)[152]

---

147 ತಾಪ್ರ. ೧೪೫ 148 ತಾಪ್ರ. ೯೬೬ 149 ತಾಪ್ರ. ೧೪/೧ 150 ತಾಪ್ರ. ೨೯೭
151 ಕಾಪ್ರ. ೨೫೧ 152 ತಾಪ್ರ. ೪೨೨

"ಟಂಕಸಾಲೆಯ ತಂಮಿಸೆಟ್ಟಿಯರ ಮಗ ತಂಮಿಸೆಟ್ಟಿಯರು ಬರಸಿದ ಜೀವ ಸಂಬೋಧನೆಗೆ ಮಂಗಲಮಹಾ ಶ್ರೀ ಶ್ರೀ" (ಮನ್ಮಥ ಸಂವತ್ಸರ)[153]

"ಸಮ್ಯಕ್ತ್ವಚೂಡಾಮಣಿಯೆನಿಸಿದ ಬಂದಣುಪಾಧ್ಯಾಯರ ಗರ್ಭಸಂಭೂತನಾದ ಹರಿಯಣಸೆಟ್ಟಿಯರು ಬರೆಯಿಸಿದ ಮಹಾಪುರಾಣಂ ಶುಭಮಸ್ತು ‖ ಶ್ರೀವತ್ಸಗೋತ್ರದ ಬೋಗೋದಿಯ ಪದುಮರಸುಪಾಧ್ಯಾಯರ ಮಗನು ಮುನಿಯಪ್ಪನು ಬರದನು" (ಶಕ ೧೪೬೭, ಚಾವುಂಡರಾಯಪುರಾಣ)[154]

"ಅಧಿಪತಿಯೆನಿಸಿದ ಚಂದ್ರಪ್ರಭಜಿನಚರಣ ಸನ್ನಿಧಾನದೊಳು ಕುಳೂರ ಶಾಂತಯ್ಯಸೆಟ್ಟಿ ಬರಸಿದ ರತ್ನಕರಂಡಕ. ಮೂಲ ವ್ಯಾಖ್ಯಾನಸಹವಾಗಿ ಬರೆಸಿದಕ್ಕೆ ಮಂಗಳಮಹಾಶ್ರೀ"[155]

"ಶ್ರೀಮತ್ಕಾಲೋಗ್ರಗಣಾಗ್ರಗಣ್ಯರು ಮುನಿಚಂದ್ರದೇವರ ಶಿಷ್ಯರು ಆದಿಯಣ್ಣಗಳಿಗೆ ಹಾಕೋಡ ಬೊಮ್ಮಿಸೆಟ್ಟಿಯರ ಮಗ ದೇವರಸೆಟ್ಟಿಯರು ಬರಸಿಕೊಟ್ಟ ವಿದಗ್ಧಚೂಡಾಮಣಿಯ ಪುಸ್ತಕಕ್ಕೆ ಮಂಗಳ ಮಹಾಶ್ರೀ"[156]

"ಪಾಯಣ್ಣಗಳು ತಮಗೆ ಪುಣ್ಯ ನಿಮಿತ್ತವಾಗಿ ಮಹಾಶ್ರೀಪಾಲ ಬರಸಿದರು" (ಶಕ ೧೫೩೧)[157]

"ಆದಿಸೇನಸ್ವಾಮಿಯವರು ಪುಸ್ತಕ ಬರಸಿದರು" (ಶಕ ೧೬೮೮, ಜ್ಞಾನಚಂದ್ರಕಾವ್ಯ)[158]

"ಹರಿವಂಶ ಗ್ರಂಥವ ಧರ್ಮಸೇನದೇವರು ಬರಸಿದರು . . . . . ಭರಮಣ್ಣನ ಪುತ್ರ ಜಿನ್ನಪ್ಪ ಬರದನು" (ಕ್ರೋಧನ ಸಂವತ್ಸರ)[159]

ಈ ಉಲ್ಲೇಖಗಳು ರಾಜಪರಿವಾರದ ಅರಮನೆ ಬಸಮ್ಮ, ಟಂಕಸಾಲೆಯ ತಮ್ಮಿಸೆಟ್ಟಿಯ ಮಗ ತಮ್ಮಿಸೆಟ್ಟಿ, ಸಮ್ಯಕ್ತ್ವ ಚೂಡಾಮಣಿ ಬಂದಣುಪಾಧ್ಯಾಯರ ಮಗ ಹರಿಯಣಸೆಟ್ಟಿ, ಕುಳೂರ ಶಾಂತಯ್ಯಶೆಟ್ಟಿ, ಹಾಕೋಡ ಬೊಮ್ಮಿಸೆಟ್ಟಿಯ ಮಗ ದೇವರಸೆಟ್ಟಿ ಹಾಗೂ ಪಾಯಣ್ಣ, ಧರ್ಮಗುರುಗಳಾದ ಆದಿಸೇನಸ್ವಾಮಿ ಮತ್ತು ಧರ್ಮಸೇನದೇವರು ಹಸ್ತಪ್ರತಿಗಳನ್ನು ಪ್ರತಿಮಾಡಿಸಿದ ಜೈನ ಪುಣ್ಯಪುರುಷರೆಂಬುದನ್ನು ನಮಗೆ ತಿಳಿಸುತ್ತವೆ.

---

153 ತಾಪ್ರ. ೧೩/೧ 154 ಕಾಪ್ರ. ೧೪೪ 155 ತಾಪ್ರ. ೩೧೯/೯ 156 ತಾಪ್ರ. ೨೭೭/೧ 157 ತಾಪ್ರ. ೧೯೬ 158 ಕಾಪ್ರ. ೧೫೭/೧ 159 ಕಾಪ್ರ. ೨೫೧

ಹಸ್ತಪ್ರತಿಗಳ ಅಂತ್ಯ ಪ್ರಶಸ್ತಿಗಳಿಂದ ತಿಳಿದುಬರುವ ವಿಶೇಷ ಸಂಗತಿಗಳನ್ನು ಸಂಗ್ರಹಿಸಿ, ಹೀಗೆ ವಿವರಿಸಬಹುದು :

"ಧಾತುನಾಮ ಸಂವತ್ಸರದಲ್ಲಿ ಜೈನಬಿದಿರೆ ಪಾಯಣ್ಣಗಳ ಜೀಯನವರು ಉತ್ತರಾದಿಯಾತ್ರೆಯ ಮಾಡಿಬಂದು ಶ್ರೀರಂಗಪಟ್ಟಣಕ್ಕೆ ಬಂದು ತಾವು ತೀರ್ಥ ಯಾತ್ರೆ ಮಾಡಿಬಂದು ಸಿದ್ಧಕ್ಷೇತ್ರ ಅತಿಶಯ ಪುಣ್ಯಕ್ಷೇತ್ರಗಳ ಬರೆಸಿಕೊಟ್ಟದ್ದು. ವಿಷ ಸಂವತ್ಸರದ ಚೈತ್ರ ಶುದ್ಧ ೧೦ಯಲ್ಲು ಬರಕೊಂಡ ವಿವರ" (ಉತ್ತರಾದಿ ತೀರ್ಥಯಾತ್ರಾ ವಿವರಣೆ)[160]

"ಇದರ ನಕಲು ಸ್ವಸ್ತಿಶ್ರೀ ಪಾರಿಶ್ವದೇವರಿಗೆ ‖೧‖ ಉಮ್ಮತ್ತಾರ ಸೂರಪ್ಪ ನವರಿಗೆ ‖೧‖ ರಾಜೇಶ್ರೀ ಅಮ್ಮಣ್ಣಿಯವರ ಸನ್ನಿಧಾನಕ್ಕೆ ‖೧‖ ಇಷ್ಟು ಪ್ರತಿಗಳನ್ನು ಬ್ರಹ್ಮಸೆಟ್ಟರು ಮುಟ್ಟಿಸಬೇಕು. ಈ ಪ್ರತಿಯನ್ನು ತಿರುಗಿ ಮೂಡು ಬಿದುರೆಗೆ ಮುಟ್ಟಿಸಬೇಕು. (ಪ್ರಥಮಗರಿಯ ಪೃಷ್ಠಭಾಗ) ಶ್ರೀ ಬೆಳಗುಳದ ಮಠಕ್ಕೆ ‖ ಶ್ರೀ ಮಸ್ತಕಾಭಿಷೇಕದ ಚರಿತೆ ಬಿದುರೆಯಿಂದ ‖"[161]

(ಆರಂಭದ ಬಿಡಿಗರಿಯಲ್ಲಿ) "ಸ್ವಸ್ತಿಶ್ರೀ ಪಾಯಸಾಗರಸ್ವಾಮಿ ಅಮ್ಮಿನಬಾವಿ ಇವರುಗಳ ಷೋಡಶಕ್ರಿಯಾದ ಬುಕ್ಕು. ಬೆಳಗುಳದಲ್ಲಿ ತೆಗೆದುಕೊಂಡದ್ದು‖ ೧೮೨೭ನೇ ವಿಶ್ವಾವಸುನಾಮ ಸಂವತ್ಸರದ ಫಾಲ್ಗುಣ ಶುದ್ಧ ಪೌರ್ಣಿಮಾ"[162]

ಮೇಲಿನ ಈ ಉದಾಹರಣೆಗಳಿಂದ ತೀರ್ಥಯಾತ್ರೆ ಮಾಡಿಬಂದವರು ಅದರ ವಿವರಗಳನ್ನು ಬರೆಸಿದುದೂ ಆಧಾರ ಪ್ರತಿ, ನಕಲು ಪ್ರತಿ ಸಂಖ್ಯೆ ಹಾಗೂ ಅವುಗಳ ಒಡೆತನ–ಸ್ಥಳ ಇತ್ಯಾದಿ ವಿವರಗಳೂ ಹಸ್ತಪ್ರತಿ ಖರೀದಿಸಿದ ಸ್ಥಳ, ಖರೀದಿಸಿದವನ ಹೆಸರು, ಗ್ರಾಮ ಮುಂತಾದ ಅಂಶಗಳೂ ತಿಳಿದುಬರುತ್ತವೆ. ಇದಲ್ಲದೆ ಕವಿಯೇ ಲಿಪಿಕಾರನಾಗಿ ಕಾರ್ಯ ಮಾಡಿದ ಅಪೂರ್ವ ಉದಾಹರಣೆಯೊಂದು ಹೀಗಿದೆ :

"ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದ ೧೭೭೪ನೇ ಪ್ರಜೋತ್ಪತ್ತಿ ಸಂವತ್ಸರದ ಶ್ರಾವಣ ಬ. ೫ಲು ಶ್ರೀಮದಾದಿಪರಮೇಶ್ವರನ ಭವಾವಳಿಯ ಯಕ್ಷಗಾನವ ಬಿದುರೆಯ ಬೊಮ್ಮಣ್ಣನು ಪೊಸತಾಗಿ ವಿರಚಿಸಿ, ತನ್ನ ಮೊಮ್ಮನು ವಾದಂತ ಚಂದ್ರೈಯ್ಯನ ಪುತ್ರ ಚಂದ್ರಪ್ಪನ ಪುತ್ರ ಚಂದ್ರೈಯ್ಯಗೆ ಬರ ಕೊಟ್ಟಂತಾ ಕೃತಿಗೆ ಭದ್ರಂ ಭೂಯಾತ್ ಶುಭಮಸ್ತು"[163]

ಇಲ್ಲಿ ಬಿದುರೆಯ ಬೊಮ್ಮಣ್ಣ ಕವಿಯಾಗಿ ಆದಿಪರಮೇಶ್ವರನ ಭವಾವಳಿಯ ಯಕ್ಷಗಾನ ರಚಿಸಿ, ಆಮೇಲೆ ಇದನ್ನೇ ತನ್ನ ಮೊಮ್ಮಗ ಚಂದ್ರಯ್ಯನ ಪುತ್ರ

---

160 ಕಾಪ್ರ. ೧೨೨/೩ 161 ತಾಪ್ರ. ೨೯೨ 162 ತಾಪ್ರ. ३೦೯ 163 ತಾಪ್ರ. ३३೪

ಚಂದಪ್ಪನ ಪುತ್ರ ಚಂದ್ರಯ್ಯನಿಗೆ ಪ್ರತಿಮಾಡಿ ಕೊಟ್ಟಿದ್ದಾನೆ. ಇದು ಕವಿಯ ಲಿಪಿಕಾರನಾಗಿ ಕಾರ್ಯಮಾಡಿದ ಪ್ರಪ್ರಥಮ ದಾಖಲೆಯಾಗಿದೆ.

ಲಿಪಿಕಾರರು ಹೇಳುವ "ಇದ್ದಹಾಂಗೆ"[164], "ಅದೇ ಪ್ರತಿ"[165], "ಪ್ರತಿಯಿದ್ದ ಹಾಗೆ"[166], "ಇದರೊಳಗೇನಾದರೂ ಅಕ್ಷರಗಳು ಚದರಿದ್ದರೆ ವಿನಯಜ್ಞರೊಲಿದೋದಿ ತಿದ್ದಿ ಕೀರ್ತಿಯ ಪಡೆದು ಮನಕೆ ಸಂತಸವ ತಾಳಿ ಮುದದಿ"[167], "ತಪ್ಪುಳ್ಳರೆ ತಿದ್ದುವದು"[168]—ಎಂಬ ಮಾತುಗಳು ಇವರ ಬರೆವಣಿಗೆಯ ಪ್ರಾಮಾಣಿಕತೆಯನ್ನೂ ವಿನಯಶೀಲತೆಯನ್ನೂ ಪ್ರತಿನಿಧಿಸುತ್ತವೆ. ಗುರುಗಳ ಹತ್ತಿರವಿದ್ದು ಹಸ್ತಪ್ರತಿ ಲೇಖನವಿದ್ಯೆ ಕಲಿಯುತ್ತಿದ್ದ ವಿಷಯವನ್ನು "ವಿದ್ಯಾಗುರು ಬೊಮ್ಮಣ್ಣ ಕವಿಗಳವರ ಪಾದವೇ ಶರಣು"[169], "ದ್ರಾವಿಡದೇಶ ಅಪ್ಪಣ್ಣ ವಿದ್ಯಾರ್ಥಿ"[170] ಎಂಬ ಉಲ್ಲೇಖಗಳಿಂದ ಕಂಡುಕೊಳ್ಳಬಹುದಾಗಿದೆ.

ಒಟ್ಟಿನಲ್ಲಿ, ಜೈನಹಸ್ತಪ್ರತಿ ಲಿಪಿಕಾರರು ತಮ್ಮ ಲೇಖನ ತಪಸ್ಸಿನ ಮೂಲಕ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಹಸ್ತಪ್ರತಿ ಭಾಂಡಾರವನ್ನು ಬೆಳೆಸಿದರು, ಜೈನ ಧರ್ಮ-ಸಾಹಿತ್ಯ-ಸಂಸ್ಕೃತಿಯನ್ನು ಸಂರಕ್ಷಿಸಿದರು.

ಸಂಕ್ಷೇಪಗಳು :

ತಾಪ್ರ—ತಾಳೆಯಗರಿ ಪ್ರತಿ

ಕಾಪ್ರ—ಕಾಗದ ಪ್ರತಿ

---

164 ಕಾಪ್ರ. ೧೦೦/೭ 165 ತಾಪ್ರ. ೨೫/೪ 166 ಕಾಪ್ರ. ೩೬/೧ 167 ತಾಪ್ರ. ೩೨೧ 168 ಕಾಪ್ರ. ೧೦೦/೧ 169 ತಾಪ್ರ. ೧೪೩ 170 ೨೪೩/೭

# ಕನ್ನಡದ ರ್, ಲ್, ಳ್ ವ್ಯಂಜನಗಳ ಸ್ಪೆಕ್ಟ್ರೊಗ್ರಾಫಿಕ್ ವಿಶ್ಲೇಷಣೆ

ಡಾ|| ಎಚ್. ಎಂ. ಮಹೇಶ್ವರಯ್ಯ

ಕನ್ನಡದಲ್ಲಿ ಬಳಕೆಯಾಗುತ್ತಿರುವ 'ರ್, ಲ್, ಳ್' ವ್ಯಂಜನಗಳಲ್ಲಿ 'ಳ್' ವ್ಯಂಜನ ಪದಗಳ ಆದಿಯಲ್ಲಿ ದೊರೆಯದೆ, ಪದಗಳ ಮಧ್ಯೆ ದೊರೆಯುತ್ತದೆ. ಉಳಿದ ರ್, ಲ್ ವ್ಯಂಜನಗಳು ಪದಗಳ ಆದಿ ಹಾಗೂ ಪದಮಧ್ಯದಲ್ಲಿ ದೊರೆಯುತ್ತವೆ. ಸ್ವರಗಳ ನಡುವೆ ಬಂದಾಗ ಸಜಾತಿಯ ದ್ವಿತ್ವವ್ಯಂಜನಗಳಾಗಿ (–ಲ್‌ಲ್–, –ರ್‌ರ್–, –ಳ್‌ಳ್–) ದೊರೆಯುತ್ತವೆ.[1] ಅಧ್ಯಯನಕ್ಕಾಗಿ ಹ್ರಸ್ವ ಹಾಗೂ ದೀರ್ಘ ವ್ಯಂಜನಗಳನ್ನು ತೆಗೆದುಕೊಳ್ಳಲಾಗಿದೆ.

ಕೆಳಗಿನ ಪದಗಳನ್ನು ವಿಶ್ಲೇಷಣೆಗಾಗಿ ಬಳಸಿಕೊಂಡಿದ್ದು, ರ್, ಲ್ ವ್ಯಂಜನಗಳು ಪದಗಳ ಆದಿಯಲ್ಲಿ, ರ್, ಲ್, ಳ್, ರ್‌ರ್, ಲ್‌ಲ್, ಳ್‌ಳ್ ವ್ಯಂಜನಗಳು ಪದಗಳ ಮಧ್ಯದಲ್ಲಿ ದೊರೆಯುತ್ತವೆ :

| | | | | | |
|---|---|---|---|---|---|
| ರೀತಿ | (ರ್–) | ಕೆರೆ | (–ರ್–) | ಇಲಿ | (–ಲ್–) |
| ರೆಕ್ಕೆ | (ರ್–) | ಕೂರು | (–ರ್–) | ಕಲಿ | (–ಲ್–) |
| ರಾಡಿ | (ರ್–) | ಕುರು | (–ರ್–) | ಬಲಿ | (–ಲ್–) |

1 ಲ್‌ಲ್, ರ್‌ರ್, ಲ್‌ಲ್ ಸಜಾತಿಯ ದ್ವಿತ್ವ ವ್ಯಂಜನಗಳನ್ನು ದೀರ್ಘ ವ್ಯಂಜನವೆಂತಲೂ ಹಾಗೂ ದ್ವಿತ್ವವಲ್ಲದ ವ್ಯಂಜನಗಳನ್ನು ಹ್ರಸ್ವವ್ಯಂಜನವೆಂದೂ ಇಲ್ಲಿ ಬಳಸಲಾಗಿದೆ.

| | | |
|---|---|---|
| ರೂಪ (ರ್–) | ಸರ (–ರ್–) | ಸಲ (–ಲ್–) |
| ರೊಟ್ಟಿ (ರ್–) | ಸಾರ (–ರ್–) | ಮೇಲೆ (–ಲ್–) |
| ಲಿಂಗ (ಲ್–) | ನರಿ (–ರ್–) | ಕೀಲಿ (–ಲ್–) |
| ಲೆಕ್ಕ (ಲ್–) | ನಾರಿ (–ರ್–) | ಹುಲಿ (–ಲ್–) |
| ಲಾಡಿ (ಲ್–) | ಸಾರು (–ರ್–) | ಸಾಲು (–ಲ್–) |
| ಲುಂಗಿ (ಲ್–) | ಸೋರು (–ರ್–) | ಕೋಲು (–ಲ್–) |
| ಇಳಿ (–ಳ್–) | ಸೂರು (–ರ್–) | ನೂಲು (–ಲ್–) |
| ಮೊಳೆ (–ಳ್–) | ಬೇರೆ (–ರ್–) | ಬಲೆ (–ಲ್–) |
| ಹೊಳೆ (–ಳ್) | ಬೀರು (–ರ್–) | ಹಾಲು (–ಲ್–) |
| ಬಳ್ಳಿ (–ಳ್ಳ್–) | ಮೊರ (–ರ್–) | ಆಲ (–ಲ್–) |
| ಎಳ್ಳು (–ಳ್ಳ್–) | ಹೊರೆ (–ರ್–) | ಚಲೋ (–ಲ್–) |
| ಕೊಳ್ಳು (–ಳ್ಳ್–) | ಇರಿ (–ರ್–) | ಮೊಲ (–ಲ್–) |
| ಹುಳ್ಳಿ (–ಳ್ಳ್–) | ಬರ್‍ರಿ (–ರ್‍ರ್–) | ಪಲ್ಲಿ (–ಲ್ಲ್–) |
| | ಕೂರ್‍ರಿ (–ರ್‍ರ್–) | ಕಲ್ಲು (–ಲ್ಲ್–) |
| | | ಸಲ್ಲ (–ಲ್ಲ್–) |

ಮೇಲೆ ಕಾಣಿಸಿದ ಎಲ್ಲ ಪದಗಳ 'ವರ್ಣಪಟಲಚಿತ್ರ' (Spectrograms)ಗಳನ್ನು, ಮೈಸೂರಿನ ಭಾರತೀಯ ಭಾಷಾ ಸಂಸ್ಥಾನದ 'ಧ್ವನಿನಿಯಂತ್ರಿತ ಸ್ಟುಡಿಯೋ'ದಲ್ಲಿ ತೆಗೆದುಕೊಳ್ಳಲಾಯಿತು. 'ವರ್ಣಪಟಲಚಿತ್ರ'ಗಳನ್ನು ಅಮೇರಿಕೆಯ KAY ಎಲಿಮೆಟ್ರಿಕ್ಸ್ ಕಂಪನಿಯವರು ತಯಾರಿಸಿದ 'ವರ್ಣಪಟಲಗ್ರಾಹಕ' ೬೦೬೧.ಬಿ ಯಿಂದ ಪಡೆಯಲಾಯಿತು. ಪ್ರಸ್ತುತ ವಿಶ್ಲೇಷಣೆಗೆ ವಿಸ್ತಾರ ಬ್ಯಾಂಡಿನ ವರ್ಣ ಪಟಲ ಚಿತ್ರ (೦–೮೦೦೦ ಎಚ್.ಝುಡ್)ಗಳನ್ನು ಪಡೆಯಲಾಗಿದ್ದು ಕಾಲಮಾನ ವನ್ನು ಮಿಲಿಸೆಕೆಂಡುಗಳಲ್ಲಿ ಕೊಡಲಾಗಿದೆ.

ವರ್ಣಪಟಲದ ಚಿತ್ರಗಳಲ್ಲಿ ಮುದ್ರಿತವಾದ ಫಾರ್‌ಮೆಂಟ್ಸ್‌ಗಳ ರಚನೆ, ಅವುಗಳ ವಿಶ್ಲೇಷಣೆ ಹಾಗೂ ವರ್ಣಪಟಲದ ಹಾಳೆಗಳ ಮೇಲೆ ಕೇಂದ್ರಿಕೃತವಾದ ಶಕ್ತಿಯನ್ನು ವಿವರಿಸದೇ, ಧ್ವನಿಗಳ ಉಚ್ಚಾರದ ಅವಧಿಯನ್ನು ಮಾತ್ರ ಈ ಲೇಖನದಲ್ಲಿ ವಿವರಿಸಲಾಗಿದೆ. ವರ್ಣಪಟಲದ ಸಮತಲರೇಖೆಯಲ್ಲಿ ಅವಧಿಯೂ ಲಂಬರೇಖೆಯಲ್ಲಿ ಶಕ್ತಿಯೂ ಕೇಂದ್ರೀಕೃತವಾಗಿರುತ್ತದೆ. ಅವಧಿಯನ್ನು ಮಿಲಿ ಸೆಕೆಂಡುಗಳಲ್ಲಿಯೂ ಶಕ್ತಿಯನ್ನು ೦–೮೦೦೦ ಎಚ್.ಝುಡ್‌ಗಳಲ್ಲಿಯೂ ಅಳೆಯ ಲಾಗುತ್ತದೆ.

## ರ್, ಲ್, ಳ್ ಹ್ರಸ್ವ ಮತ್ತು ದೀರ್ಘ ವ್ಯಂಜನಗಳ ಉಚ್ಚಾರದ ಅವಧಿಯ ವಿಶ್ಲೇಷಣೆ :

ಮೇಲೆ ತಿಳಿಸಿದ ಹ್ರಸ್ವವ್ಯಂಜನಗಳ ಉಚ್ಚಾರದ ಅವಧಿಯನ್ನು ಪಟ್ಟಿ ಸಂಖ್ಯೆ ೧ರಲ್ಲಿಯೂ ದೀರ್ಘವ್ಯಂಜನಗಳ ಅವಧಿಯನ್ನು ಪಟ್ಟಿ ಸಂಖ್ಯೆ ೨ರಲ್ಲಿಯೂ ಕೊಡಲಾಗಿದೆ. ಜೊತೆಗೆ ಅವುಗಳ ತೌಲನಿಕ ವಿವರಣೆಯನ್ನೂ ಕೆಳಗಿನ ಪಟ್ಟಿಗಳಲ್ಲಿ ತೋರಿಸಲಾಗಿದೆ :

| ಧ್ವನಿಘಟಕ | ಧ್ವನಿಗಳ ಸಂಖ್ಯೆ | ಕನಿಷ್ಠ ಅವಧಿ | ಗರಿಷ್ಠ ಅವಧಿ | ಸರಾಸರಿ | ವ್ಯತ್ಯಾಸ |
|---|---|---|---|---|---|
| ರ್– | ೫ | ೨೨ ಮಿ.ಸೆ. | ೪೦ ಮಿ.ಸೆ. | ೩೦ ಮಿ.ಸೆ. | ೬ ಮಿ.ಸೆ. |
| –ರ್– | ೧೫ | ೨೦ ಮಿ.ಸೆ. | ೩೫ ಮಿ.ಸೆ. | ೨೪ ಮಿ.ಸೆ. | |
| ಲ್– | ೪ | ೪೦ ಮಿ.ಸೆ. | ೧೦೨ ಮಿ.ಸೆ. | ೬೬.೨ ಮಿ.ಸೆ. | ೧೧.೩ ಮಿ.ಸೆ. |
| –ಲ್– | ೧೬ | ೬೦ ಮಿ ಸೆ. | ೮೫ ಮಿ.ಸೆ. | ೭೭.೫ ಮಿ.ಸೆ. | |

ಪಟ್ಟಿ ಸಂಖ್ಯೆ ೧: ಪದಗಳ ಆದಿ ಹಾಗೂ ಪದಗಳ ಮಧ್ಯೆ ಬರುವ ಹ್ರಸ್ವವ್ಯಂಜನಗಳ ಅವಧಿಯ ತುಲನೆ

| | | | | | |
|---|---|---|---|---|---|
| –ರ್– | ೧೫ | ೨೦ ಮಿ.ಸೆ. | ೩೫ ಮಿ.ಸೆ. | ೨೪ ಮಿ.ಸೆ. | ೮೬.೭ ಮಿ.ಸೆ. |
| –ರ್ರ್– | ೨ | ೧೦೦ ಮಿ.ಸೆ. | ೧೬೦ ಮಿ.ಸೆ. | ೧೩೦ ಮಿ.ಸೆ. | |
| –ಲ್– | ೧೬ | ೬೦ ಮಿ.ಸೆ. | ೮೫ ಮಿ.ಸೆ. | ೭೭.೫ ಮಿ.ಸೆ. | ೧೦೭.೫ ಮಿ.ಸೆ. |
| –ಲ್ಲ್– | ೨ | ೧೬೫ ಮಿ.ಸೆ. | ೨೦೦ ಮಿ.ಸೆ. | ೧೮೫ ಮಿ.ಸೆ. | |
| –ಳ್– | ೪ | ೩೦ ಮಿ.ಸೆ. | ೬೦ ಮಿ.ಸೆ. | ೪೩.೧ ಮಿ.ಸೆ. | ೧೩೪.೨ ಮಿ. ಸೆ. |
| –ಳ್ಳ್– | ೪ | ೧೫೦ ಮಿ.ಸೆ. | ೧೯೨ ಮಿ.ಸೆ. | ೧೭೭.೫ ಮಿ.ಸೆ. | |

ಪಟ್ಟಿ ಸಂಖ್ಯೆ ೨: ಪದಗಳ ಮಧ್ಯೆ ಬರುವ ಹ್ರಸ್ವ ಹಾಗೂ ದೀರ್ಘ ವ್ಯಂಜನಗಳ ಅವಧಿಯ ತುಲನೆ

ಪಟ್ಟಿ ಸಂಖ್ಯೆ ೧ರಲ್ಲಿ ತೋರಿಸಿದಂತೆ ಆ ಪದದ ಆದಿಯಲ್ಲಿ ಬರುವ 'ರ್–' ವ್ಯಂಜನ ಎರಡು ಸ್ವರಗಳ ಮಧ್ಯೆ ಬರುವ '–ರ್–' ವ್ಯಂಜನಕ್ಕಿಂತ ೬ ಮಿ. ಸೆ. ದೀರ್ಘವಾಗಿದೆ. ದೀರ್ಘತೆಯ ಪ್ರಮಾಣ ೧:೧.೨ ಆಗಿದೆ. ಇದಕ್ಕೆ ವಿರುದ್ಧವಾಗಿ ಸ್ವರಗಳ ಮಧ್ಯೆ ಬರುವ '–ಲ್–' ವ್ಯಂಜನ, ಪದದ ಆದಿಯಲ್ಲಿ ಬರುವ 'ಲ್–' ವ್ಯಂಜನಕ್ಕಿಂತ ೧೩.೩ ಮಿ. ಸೆ. ದೀರ್ಘವಾಗಿದೆ ಹಾಗೂ ಅದರ ಪ್ರಮಾಣ ೧:೧.೨ ಆಗಿದೆ.

ಪಟ್ಟಿ ಸಂಖ್ಯೆ ೨ರಲ್ಲಿ ತೋರಿಸಿದಂತೆ ಸ್ವರಗಳ ಮಧ್ಯೆ ಬರುವ ದೀರ್ಘ ವ್ಯಂಜನ '–ರ್ರ್–' ಪದದ ಮಧ್ಯೆ ಬರುವ ಹ್ರಸ್ವ '–ರ್–' ವ್ಯಂಜನಕ್ಕಿಂತ ೮೬·೭ ಮಿ. ಸೆ. ದೀರ್ಘವಾಗಿದೆ. ಅದರ ಪ್ರಮಾಣ ೧ : ೫·೫ ಪದದ ಮಧ್ಯೆ ಹ್ರಸ್ವಸ್ವರಗಳ ನಂತರ ಬರುವ ದೀರ್ಘವ್ಯಂಜನ, ದೀರ್ಘಸ್ವರಗಳ ನಂತರ ಬರುವ ದೀರ್ಘ ವ್ಯಂಜನಕ್ಕಿಂತ ಹೆಚ್ಚು ಅವಧಿಯನ್ನು ತೆಗೆದುಕೊಳ್ಳುತ್ತದೆ.

ಸ್ವರಗಳ ಮಧ್ಯೆ ಬರುವ ದೀರ್ಘ ವ್ಯಂಜನ '–ಲ್ಲ್–', ಸ್ವರಗಳ ಮಧ್ಯೆ ಬರುವ ಹ್ರಸ್ವ ವ್ಯಂಜನ '–ಲ್–' ಗಿಂತ ೧೦೭.೫ ಮಿ.ಸೆ. ಹೆಚ್ಚು ಕಾಲಾವಧಿಯನ್ನು ತೆಗೆದುಕೊಳ್ಳುತ್ತದೆ. ಅದರ ಪ್ರಮಾಣ ೧ : ೨·೩ ಆಗಿದೆ. ಸ್ವರಗಳ ಮಧ್ಯೆ ಬರುವ ದೀರ್ಘ ವ್ಯಂಜನ '–ಳ್ಳ್–', ಸ್ವರಗಳ ಮಧ್ಯೆ ಬರುವ ಹ್ರಸ್ವ '–ಳ್–' ಗಿಂತ ೧೩೪.೨ ಮಿ.ಸೆ. ಹೆಚ್ಚು ಕಾಲಾವಧಿಯನ್ನು ತೆಗೆದುಕೊಳ್ಳುತ್ತದೆ. ಆದರ ಪ್ರಮಾಣ ೧ : ೪·೧ ಆಗಿದೆ. ಹ್ರಸ್ವ ಹಾಗೂ ದೀರ್ಘ ವ್ಯಂಜನ 'ರ್' ಮತ್ತು 'ಳ್'ಗಳ ಕಾಲಾವಧಿಯ ಪ್ರಮಾಣವನ್ನು ಹೋಲಿಸಿದಾಗ ಹ್ರಸ್ವ ಮತ್ತು ದೀರ್ಘ ವ್ಯಂಜನ 'ಳ್'ಗಳ ಪ್ರಮಾಣ 'ರ್'ಗಳ ಪ್ರಮಾಣಕ್ಕಿಂತ ಅಧಿಕವಾಗಿರುವುದು ಕಂಡುಬರುತ್ತದೆ. ಅಲ್ಲದೇ ಹ್ರಸ್ವ ಹಾಗೂ ದೀರ್ಘ 'ಲ್' ಮತ್ತು 'ಳ್'ಗಳ ಕಾಲಾವಧಿಯನ್ನು ಹೋಲಿಸಿ ನೋಡಿದಾಗ ಹ್ರಸ್ವ ಮತ್ತು ದೀರ್ಘ 'ಳ್'ಗಳಿಗಿಂತ 'ಲ್'ಗಳ ಕಾಲಾವಧಿ ಅಧಿಕವಿರುವುದು ಕಂಡುಬರುತ್ತದೆ. ರ್, ಲ್, ಳ್ ಹ್ರಸ್ವ ಮತ್ತು ದೀರ್ಘ ವ್ಯಂಜನಗಳ ಉಚ್ಚಾರಣಾ ಅವಧಿಯಲ್ಲಿ ಕಂಡುಬರುವ ವ್ಯತ್ಯಾಸವು ಅವುಗಳ ಉಚ್ಚಾರಣಾ ರೀತಿಯನ್ನು ಅವಲಂಬಿಸಿದೆ ಎಂಬುದು ಗೊತ್ತಾಗುತ್ತದೆ.

ಮೇಲೆ ವಿವರಿಸಿದ ಅಧ್ಯಯನದ ಹಿನ್ನೆಲೆಯಲ್ಲಿ ವ್ಯಂಜನಗಳ ವಾರ್ಧಿಕ ಕಾಲಾವಧಿಯನ್ನು ಕೆಳಗಿನಂತೆ ಕ್ರೋಢೀಕರಿಸಬಹುದಾಗಿದೆ :

ರ್ > ಳ್ > ಲ್ > ರ್ರ್ > ಳ್ಳ್ > ಲ್ಲ್

ಅವಧಿ ಮಿ.ಸೆ. ಗಳಲ್ಲಿ : ೨೭ ಮಿ.ಸೆ. > ೪೩·೩ ಮಿ.ಸೆ. > ೭೧·೮ ಮಿ.ಸೆ. >
೧೩೦ ಮಿ.ಸೆ. > ೧೭೭·೫ ಮಿ.ಸೆ. > ೧೮೫ ಮಿ.ಸೆ.

ಇನ್ನೂ ವಿವರವಾಗಿ, ವ್ಯಂಜನಗಳು ಪದದ ಆದಿಯಲ್ಲಿ ಹಾಗೂ ಮಧ್ಯದಲ್ಲಿ ದೊರೆಯುವ ಕಾಲಾವಧಿಯನ್ನು ಗಮನಿಸಿದಾಗ, ಕೆಳಗಿನಂತೆ ಕ್ರೋಢೀಕರಿಸಬಹುದು :

–ರ್– > ರ್– > ಲ್– > –ಲ್– > –ರ್ರ್– > –ಳ್ಳ್– > –ಲ್ಲ್–
೨೪ ಮಿ.ಸೆ. > ೩೦ ಮಿ.ಸೆ. > ೬೬·೨ ಮಿ.ಸೆ. > ೭೭·೫ ಮಿ.ಸೆ. > ೧೩೦ ಮಿ.ಸೆ.
> ೧೭೭·೫ ಮಿ.ಸೆ. > ೧೮೫ ಮಿ.ಸೆ.

## ಸಹಾಯಕ ಗ್ರಂಥಗಳು, ಲೇಖನಗಳು :


BALASUBRAMANIAM, T. : The two 'r' and the two 'n' in Tamil. *Journal of Phonetics* 10, 89–97 (1982)

CATFORD, J.C. : *Fundamental Problems in Phonetics*. Edinburgh : Edinburgh University (1957)

CONNAR, J.D.O., GERSTMAN, L.J. : Acoustic cue for the perception of inial/w, j, r, l/in English word. *Word* 13.1.24–43 (1957)

FANT, GUNNAR : *Speech Sounds and Features*. The MIT Press. (1973)

LISKER, LEIGH : Minimal cue for separating/w, r, l, y/ in intervocalic position. *Word*, 13.1.256–267 (1957)

RAJAPUROHIT, B.B. : *Acoustic Charecteristics of Kannada*. C.I.I.L. Press, Mysore (1982)


---


ಈ ಲೇಖನ ಬರೆಯಲು ಮಾರ್ಗದರ್ಶನ ನೀಡಿದ ಶ್ರೀಮತಿ (ಡಾ॥) ನಾಗಮ್ಮ ರೆಡ್ಡಿ, ಡಾ॥ ಕೆ. ಮುರಿಗಯ್ಯನ್ ಹಾಗೂ ಡಾ॥ ಬಿ. ಬಿ. ರಾಜಪುರೋಹಿತ ಅವರಿಗೂ ಭಾರತೀಯ ಭಾಷಾ ಸಂಸ್ಥಾನದ ನಿರ್ದೇಶಕರು ಹಾಗೂ ಅವರ ತಾಂತ್ರಿಕ ಸಿಬ್ಬಂದಿಯಾದ ಆರ್. ನಾಗರಾಜ ಅವರುಗಳ ಸಹಾಯಕ್ಕೆ ಕೃತಜ್ಞತೆಗಳು ; ಶಿಬಿರಕ್ಕೆ ಹಾಜರಾಗಲು ಅನುಮತಿ ನೀಡಿದ ಕನ್ನಡ ಅಧ್ಯಯನ ಪೀಠದ ಮುಖ್ಯಸ್ಥರಾದ ಡಾ॥ ಎಂ. ಎಂ. ಕಲಬುರ್ಗಿಯವರಿಗೆ ನನ್ನ ವಂದನೆಗಳು.

ಪಟ್ಟಿ ಸಂಖ್ಯೆ ೨ರಲ್ಲಿ ತೋರಿಸಿದಂತೆ ಸ್ವರಗಳ ಮಧ್ಯೆ ಬರುವ ದೀರ್ಘ ವ್ಯಂಜನ '-ರ್ರ್-' ಪದದ ಮಧ್ಯೆ ಬರುವ ಹ್ರಸ್ವ '-ರ್-' ವ್ಯಂಜನಕ್ಕಿಂತ ೮೬·೭ ಮಿ. ಸೆ. ದೀರ್ಘವಾಗಿದೆ. ಅದರ ಪ್ರಮಾಣ ೧ : ೫·೫ ಪದದ ಮಧ್ಯೆ ಹ್ರಸ್ವಸ್ವರಗಳ ನಂತರ ಬರುವ ದೀರ್ಘವ್ಯಂಜನ, ದೀರ್ಘಸ್ವರಗಳ ನಂತರ ಬರುವ ದೀರ್ಘ ವ್ಯಂಜನಕ್ಕಿಂತ ಹೆಚ್ಚು ಅವಧಿಯನ್ನು ತೆಗೆದುಕೊಳ್ಳುತ್ತದೆ.

ಸ್ವರಗಳ ಮಧ್ಯೆ ಬರುವ ದೀರ್ಘ ವ್ಯಂಜನ '-ಲ್ಲ್-', ಸ್ವರಗಳ ಮಧ್ಯೆ ಬರುವ ಹ್ರಸ್ವ ವ್ಯಂಜನ '-ಲ್-' ಗಿಂತ ೧೦೭.೫ ಮಿ.ಸೆ. ಹೆಚ್ಚು ಕಾಲಾವಧಿಯನ್ನು ತೆಗೆದುಕೊಳ್ಳುತ್ತದೆ. ಅದರ ಪ್ರಮಾಣ ೧ : ೨·೩ ಆಗಿದೆ. ಸ್ವರಗಳ ಮಧ್ಯೆ ಬರುವ ದೀರ್ಘ ವ್ಯಂಜನ '-ಳ್ಳ್-', ಸ್ವರಗಳ ಮಧ್ಯೆ ಬರುವ ಹ್ರಸ್ವ '-ಳ್-' ಗಿಂತ ೧೩೪.೨ ಮಿ.ಸೆ. ಹೆಚ್ಚು ಕಾಲಾವಧಿಯನ್ನು ತೆಗೆದುಕೊಳ್ಳುತ್ತದೆ. ಅದರ ಪ್ರಮಾಣ ೧: ೪·೧ ಆಗಿದೆ. ಹ್ರಸ್ವ ಹಾಗೂ ದೀರ್ಘ ವ್ಯಂಜನ 'ರ್' ಮತ್ತು 'ಳ್'ಗಳ ಕಾಲಾವಧಿಯ ಪ್ರಮಾಣವನ್ನು ಹೋಲಿಸಿದಾಗ ಹ್ರಸ್ವ ಮತ್ತು ದೀರ್ಘ ವ್ಯಂಜನ 'ಳ್'ಗಳ ಪ್ರಮಾಣ 'ರ್'ಗಳ ಪ್ರಮಾಣಕ್ಕಿಂತ ಅಧಿಕವಾಗಿರುವುದು ಕಂಡುಬರುತ್ತದೆ. ಅಲ್ಲದೇ ಹ್ರಸ್ವ ಹಾಗೂ ದೀರ್ಘ 'ಲ್' ಮತ್ತು 'ಳ್'ಗಳ ಕಾಲಾವಧಿಯನ್ನು ಹೋಲಿಸಿ ನೋಡಿದಾಗ ಹ್ರಸ್ವ ಮತ್ತು ದೀರ್ಘ 'ಳ್'ಗಳಿಗಿಂತ 'ಲ್'ಗಳ ಕಾಲಾವಧಿ ಅಧಿಕವಿರುವುದು ಕಂಡುಬರುತ್ತದೆ. ರ್, ಲ್, ಳ್ ಹ್ರಸ್ವ ಮತ್ತು ದೀರ್ಘ ವ್ಯಂಜನಗಳ ಉಚ್ಚಾರಣಾ ಅವಧಿಯಲ್ಲಿ ಕಂಡುಬರುವ ವ್ಯತ್ಯಾಸವು ಅವುಗಳ ಉಚ್ಚಾರಣಾ ರೀತಿಯನ್ನು ಅವಲಂಬಿಸಿದೆ ಎಂಬುದು ಗೊತ್ತಾಗುತ್ತದೆ.

ಮೇಲೆ ವಿವರಿಸಿದ ಅಧ್ಯಯನದ ಹಿನ್ನೆಲೆಯಲ್ಲಿ ವ್ಯಂಜನಗಳ ವಾರ್ಧಿಕ ಕಾಲಾವಧಿಯನ್ನು ಕೆಳಗಿನಂತೆ ಕ್ರೋಢೀಕರಿಸಬಹುದಾಗಿದೆ :

ರ್ > ಳ್ > ಲ್ > ರ್ರ್ > ಳ್ಳ್ > ಲ್ಲ್

ಅವಧಿ ಮಿ.ಸೆ. ಗಳಲ್ಲಿ : ೨೭ ಮಿ.ಸೆ. > ೪೩·೩ ಮಿ.ಸೆ. > ೭೧·೮ ಮಿ.ಸೆ. > ೧೩೦ ಮಿ.ಸೆ. > ೧೭೭·೫ ಮಿ.ಸೆ. > ೧೮೫ ಮಿ.ಸೆ.

ಇನ್ನೂ ವಿವರವಾಗಿ, ವ್ಯಂಜನಗಳು ಪದದ ಆದಿಯಲ್ಲಿ ಹಾಗೂ ಮಧ್ಯದಲ್ಲಿ ದೊರೆಯುವ ಕಾಲಾವಧಿಯನ್ನು ಗಮನಿಸಿದಾಗ, ಕೆಳಗಿನಂತೆ ಕ್ರೋಢೀಕರಿಸಬಹುದು :

-ರ್- > ರ್- > ಲ್- > -ಲ್- > -ರ್ರ್- > -ಳ್ಳ್- > -ಲ್ಲ್-

೨೪ ಮಿ.ಸೆ. > ೩೦ ಮಿ.ಸೆ. > ೬೬·೨ ಮಿ.ಸೆ. > ೭೭·೫ ಮಿ.ಸೆ. > ೧೩೦ ಮಿ.ಸೆ. > ೧೭೭·೫ ಮಿ.ಸೆ. > ೧೮೫ ಮಿ.ಸೆ.

ಈ ಪುಟ್ಟ ಟಿಪ್ಪಣಿಯ ಮುಖ್ಯ ಉದ್ದೇಶ. ಒಂದೆರಡು ಪಾಠಾಂತರಗಳ ಹೊರತು ಬೇರೆ ಯಾವ ಬದಲಾವಣೆಯೂ ಇಲ್ಲದೆ ಈ ಗಾಹೆ ಯಥಾಸ್ಥಿತಿಯಲ್ಲಿ ದಿವಾಕರಣಂದಿಯ 'ತತ್ತ್ವಾರ್ಥ ಸೂತ್ರಾನುಗತ ಕರ್ಣಾಟಕ ಲಘುವೃತ್ತಿಯಲ್ಲಿ'ಯಲ್ಲಿ ಉದಾಹೃತವಾಗಿದೆ; ಹೆಚ್ಚಿನ ಸಂಗತಿಯೇನೆಂದರೆ ಪ್ರಾಕೃತ ಗಾಹೆಗೆ ದಿವಾಕರಣಂದಿಯು ಕನ್ನಡ ವೃತ್ತಿಯನ್ನು ಕೊಟ್ಟಿದ್ದಾನೆ:

> ಅಚ್ಛಿಣಿಮೀಳಣಮೆತ್ತಂ=ಕಣ್ಣಮೆ ಇಕ್ಕುವನಿತುವರಂ ಬೇಗಮಾದೊಡಂ, ಣತ್ಥಿ ಸುಹಂ=ಸುಖಮಿಲ್ಲ, ದುಕ್ಖಮೇವ ಅಣುಬದ್ಧಂ=ದುಃಖಮನೆ ಬಳಿಸಂಧಿಪ್ಪರು, ಣಿರಯೇ=ನರಕದಲ್ಲಿ, ಣೇರಯೀ ಯಾಣಂ=ನಾರಕರು, ಅಹಣ್ಣಿಸಂ=ಅಹರ್ನಿಶಂ, ಪಚ್ಚಮಾಣಾಣಂ=ದುಃಖಾಗ್ನಿಯಿಂ ಸುಡೆಪಡುತ್ತಿಪ್ಪವರ್ಗಳುಂ ||

ಉಮಾಸ್ವಾತಿ(ಮಿ) ಇಲ್ಲವೇ ಗೃಧ್ರಪಿಂಛಾಚಾರ್ಯಕೃತ ಸಂಸ್ಕೃತ 'ತತ್ತ್ವಾರ್ಥಸೂತ್ರ' ಶಾಸ್ತ್ರಗ್ರಂಥಕ್ಕೆ ಕನ್ನಡದಲ್ಲಿ ಬರೆಯಲಾದ ಮೊದಲ ವ್ಯಾಖ್ಯಾನ ಗ್ರಂಥವೇ ದಿವಾಕರಣಂದಿ ರಚಿಸಿರುವ ತತ್ತ್ವಾರ್ಥಸೂತ್ರ ವೃತ್ತಿ. ದಿವಾಕರಣಂದಿಯ ವಿಚಾರವಾಗಿ ನಗರ ೫೭ನೆಯ ಶಾಸನ ಮತ್ತು ಸೊರಬ ೫೮ನೆಯ ಶಾಸನದಿಂದ ಕೆಲವು ವಿಚಾರಗಳು ತಿಳಿದುಬರುತ್ತವೆ. ಅದರ ಪ್ರಕಾರ ದಿವಾಕರಣಂದಿಯ ಕಾಲ ೧೦೬೨ (ಶಕ ೯೮೪) ಎಂದು ಖಚಿತವಾಗಿ ಗೊತ್ತಾಗುತ್ತದೆ. ಹಾಗಾದರೆ ವಡ್ಡಾರಾಧನೆಯ ಕಾಲ ನಿರ್ಧಾರಕ್ಕೆ ಇದನ್ನೇ ಒಂದು ಪ್ರಬಲ ಆಧಾರವೆಂದು ಅಂಗೀಕರಿಸಬಹುದೇ ಎಂಬುದು ನಮ್ಮ ಮುಂದಿನ ಸಮಸ್ಯೆ. ಇದನ್ನು ಮುಖ್ಯ ಆಕರವಾಗಿ ಸ್ವೀಕರಿಸಲು ಮೂರು ತೊಡಕುಗಳಿವೆ: ೧. ಈ ಕನ್ನಡ ವೃತ್ತಿಯಲ್ಲಿ ವೃತ್ತಿಕಾರನಾದ ದಿವಾಕರಣಂದಿಯು ಮೂಲದಲ್ಲಿಲ್ಲದ ಎಷ್ಟೋ ಸಂಸ್ಕೃತ ಪ್ರಾಕೃತ ಪದ್ಯಗಳನ್ನು ಯಥೋಚಿತವಾಗಿ ಅನ್ಯಮೂಲಗಳಿಂದ ತಂದು ಸೇರಿಸಿದ್ದಾನೆ. ೨. ಈ ಗಾಹೆಯು ದಿವಾಕರಣಂದಿಯ ವೃತ್ತಿಯ ಉಪಲಬ್ಧ ತಾಡೆಯೋಲೆ ಹಸ್ತಪ್ರತಿಗಳಲ್ಲಿ ಒಂದರಲ್ಲಿ ಮಾತ್ರ ಇದ್ದು, ಇನ್ನೆರಡು ಪ್ರತಿಗಳಲ್ಲಿ ದೊರೆಯುವುದಿಲ್ಲ. ೩. ಈಗಾಗಲೆ ತಿಳಿದಿರುವಂತೆ ಈ ಗಾಹೆಯು ದಿವಾಕರಣಂದಿಗಿಂತಲೂ ಹಿಂದಿನದು, ನೇಮಿಚಂದ್ರರ ತ್ರಿಲೋಕಸಾರಕ್ಕೆ ಸೇರಿದ್ದು. ಈ ಮೂರು ಕಾರಣಗಳಿಗಾಗಿ ವಡ್ಡಾರಾಧನೆಯ ಕಾಲವಿಚಾರ ಚರ್ಚೆ ಇನ್ನೂ ಶೋಧನೆಗೆ ತೆರೆದ ವಿಷಯವಾಗಿಯೇ ಉಳಿದುಕೊಳ್ಳುತ್ತದೆ.

# ಶ್ರವಣಬೆಳ್ಗೊಳ : ಸ್ಥಳಪುರಾಣ

ಡಾ|| ಬಿ. ವ್ಹಿ. ಶಿರೂರ

[ಸ್ಥಳಪುರಾಣಗಳು, ಆ ಆ ಸ್ಥಳಗಳ ಏಳು-ಬೀಳು, ಮಹತಿ ಮಹಾತ್ಮೆಗಳನ್ನು ಹಿಡಿದಿಡಲು ಮಾಡಿದ ಪ್ರಯತ್ನಗಳು. ಇವುಗಳಲ್ಲಿ ಕೆಲವು ಬಾಯಿಂದ ಬಾಯಿಗೆ ಹರಿದುಬಂದಿದ್ದರೆ, ಹಲವು ಮಾತ್ರ ಗ್ರಂಥಸ್ಥರೂಪ ಧರಿಸಿವೆ. ಹೀಗೆ ಗ್ರಂಥಸ್ಥರೂಪ ಪಡೆದಿರುವ ಕೆಲವೇ ಕೆಲವು ಸ್ಥಳಪುರಾಣಗಳಲ್ಲಿ ಶ್ರವಣಬೆಳ್ಗೊಳ ಸ್ಥಳಪುರಾಣವೂ ಒಂದು. ಇದರ ಕೃರ್ತವಾರೋ ತಿಳಿಯದು. ಇದರ ಕೊನೆಯಲ್ಲಿ ಮೈಸೂರ ಸಂಸ್ಥಾನದ ದಿವಾನರಾಗಿದ್ದ ಪೂರ್ಣಯ್ಯನವರ ಪ್ರಸ್ತಾಪ ಬರುವುದು. ಇದರ ಕಾಲ ಕ್ರಿ. ಶ. ಸುಮಾರು ೧೮೧೦ ಎಂದು ಕವಿಚರಿತೆಕಾರರ ಅಭಿಪ್ರಾಯ. ಇಲ್ಲಿ ಕೇವಲ ಘಟನೆಗಳ ನಿರೂಪಣೆಗೆ ಪ್ರಾಮುಖ್ಯತೆ ಇದೆಯೇ ಹೊರತು ಚಾರಿತ್ರಿಕ ಸತ್ಯಕ್ಕಾಗಿ ಅಲ್ಲ. ಆದರೂ ಸ್ಥಳದ ಮಹತಿಯನ್ನು ಗುರುತಿಸುವಲ್ಲಿ ಇದನ್ನೊಂದು ಆಧಾರವಾಗಿ ಇಟ್ಟುಕೊಳ್ಳಬಹುದಾಗಿದೆ].

[1]ದಕ್ಷಿಣ ಮಧುರೆಯ ಅಧಿಪತಿಯೂ ಜೈನಕ್ಷತ್ರಿಯ ಪಾಂಡುಕುಲೋದ್ಭವನೂ ಆದ ಚಾವುಂಡರಾಯನು, ತನ್ನ ಪರಿವಾರವನ್ನೂ ಆನೆ, ಕುದುರೆ, ರಥ, ಕಾಲಾಳುಗಳನ್ನೂ ಒಳಗೊಂಡು, ಪೌದನಪುರದಲ್ಲಿಯ ೫೦೦ ಬಿಲ್ಲು ಎತ್ತರದ ಗೊಮ್ಮಟಮೂರ್ತಿಯನ್ನೂ ನಾಡಿನ ಸುತ್ತುಮುತ್ತಲು ಇರುವ ೧೩೫೪ ಬೇರೆ ಬೇರೆ ಸಣ್ಣ ಸಣ್ಣ ಜಿನಾಲಯಗಳನ್ನೂ ನೋಡಲು ಹೊರಟನು. ಪ್ರಯಾಣ ಮಧ್ಯದಲ್ಲಿ, ಶ್ರವಣಬೆಳ್ಗೊಳದಲ್ಲಿ ೧೮ ಬಿಲ್ಲು ಎತ್ತರದ ಗೊಮ್ಮಟಮೂರ್ತಿ ಇರುವುದನ್ನು ಕೇಳಿ, ಅಲ್ಲಿಗೆ ಬಂದನು. ಅಲ್ಲಿಯ ಜಿನಾಲಯಗಳನ್ನು ಜೀರ್ಣೋದ್ಧಾರಗೊಳಿಸಿ, ಎಲ್ಲ ಸಂಸ್ಕಾರಗಳನ್ನು ನೆರವೇರಿಸಿದನು.[1]

---

1 (ಮೆ). ಅ ಮತ್ತು ಬ ಪ್ರತಿಗಳಲ್ಲಿ ಮೊದಲ ಪುಟ ಇಲ್ಲವಾದ್ದರಿಂದ ಇಂಡಿಯನ್ ಆಂಟಿಕ್ವೇರಿ, ಸಂಪುಟ ೩ರಲ್ಲಿಯ ಇಂಗ್ಲಿಷ್ ಮೂಲದ ಕನ್ನಡ ಅನುವಾದವನ್ನು ಇಲ್ಲಿ ಕೊಟ್ಟಿದೆ.

ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ ಮುಂತಾದ ಉತ್ಸವಾದಿಗಳಿಗೆ ವರುಷ ಒಂದಕ್ಕೆ ೧೧ ಪರ್ವ ಗದ್ದೆಯು ನಡಿತಕ್ಕ ಬಗ್ಗೆ ಶಾಸ್ತ್ರಯವಧಿ ಸಂಗವಾಗಿ ಈ ಉತ್ಸವಾದಿಗಳು ನಡೆಯತಕ್ಕ ಬಗ್ಗೆ, ದೇಶಿಗಣಗಣ್ಯರಾದ ಮಠಪತಿಗಳು [2]ನೇಮಿಚಕ್ರ[2] ಸಿದ್ಧಾಂತಾಚಾರ್ಯ ಗುರುಗಳಿಗೆ ನೇಮಿಸಿ, [3]ಛತ್ರವನ್ನು ಮಾಡಿಸಿ, ಮಠದಲ್ಲಿ[3] ಆಹಾರಾಭಯಬೈಶ್ಯಾಜ್ಯಸ್ತ್ರದಾನಗಳೆಂಬ ಚತುರ್ವಿಧ ಮುಖ್ಯ ದಾನವು ಅನವ್ರತದಲ್ಲಿಯು ನಡೆಯತಕ್ಕ ಬಗ್ಗೆ, ಈ ಕ್ಷೇತ್ರದಲ್ಲಿ, ಈ ದೇವರ, ಅತಿಶಯ ಬಹಳವಾ[ದು]ದರಿಂವ, ಸೇವಾರ್ಥವಾಗಿ ಡಿಳ್ಳಿ ಕನಕಾದಿ ಶ್ವೇತಪುರ, ಸುಧಾಪುರ [4]ಪಾಪಾ[4]ಪುರಿ, ಚಂಪಾಪುರಿ, ಸಮ್ಮೋದಗಿರಿ, ಉಜಯಂತಗಿರಿ, ವಿಜಯನಗರ ಮುಂತಾದ ದೇಶಗಳಿಂದ ಯಾತ್ರೆ ನಿಮಿತ್ಯವಾಗಿ ಬಹಳ ತಪಿಸ್ವಿಗಳು, ಬ್ರಹ್ಮ, ಕ್ಷತ್ರಿಯ ವೈಶ್ಯರೆಂಬ ತ್ರೈವರ್ಣಿಕರು, ಬಹುಜನರು ಬರುವಂತವರಿಗೆ, ಅವರವರ ಯೋಗ್ಯಾನುಸಾರವಾಗಿ ಉಪಚಾರಗಳ ನಡೆಸತಕ್ಕ ಬಗ್ಗೆ ಸಹ, ತನ್ನ ವಂಶದ ಕ್ಷತ್ರಿಯರನ್ನು ಇರಿಸಿ, ಮೇಲೆ ಬರೆದು ಇರುವಂಥಾ ಧರ್ಮಗಳು ಸಾಂಗಿಕವಾಗಿ ನಡೆಯತಕ್ಕ ಬಗ್ಗೆ ಸಹ, ೧,೯೬,೦೦೦ ಸಾವಿರ ವರಹಾ ಗ್ರಾಮಭೂಮಿ[5]ಯನ್ನು[5] ಸ್ವಾಸ್ಥ್ಯವನ್ನು ಕೊಟ್ಟ ಬಗ್ಗೆ ವರ್ಧಮಾನಸ್ವಾಮಿ ಮುಕ್ತಿ[ಗೆ] ಸಂದಾ ೬೦೫ ವರುಷಕ್ಕೆ ಕಲಿಯುಗ ವಿಭವನಾಮ ಸಂ. ಚೈತ್ರಮಾಸದಲ್ಲಿ ಶಿಲಾಶಾಸನ ಪ್ರತಿಷ್ಠೆಯನ್ನು ಚತುರ್ದಿಕ್ಕಿನಲ್ಲೂ [6]ಮಾಡಿಸಿ, ಮುಂದಕ್ಕೆ ಪ್ರಯಾಣ ತೆರಳಿದರು. ಇವರು[6] ಮಾಡಿಸಿದಂತಾ ಸೀಮೆ ಭೂಮಿಗಳ್ನು [7]ವರ್ಧಮಾನ ಮುಕ್ತಿಗೆ ಸಂದಾ ೧೩೧೫ರಲ್ಲಿ[7] ಅವರ ಪುತ್ರರು ಮುಂತಾದವರು ೧೮೦ ವರ್ಷ ನಡೆಸಿದರು.

ಈ ತರುವಾಯ ಶಕವರುಷ ೪೭೪ಕ್ಕೆ ಪ್ರಜೋತ್ಪತಿ ಸಂ. ಆರಾಭ್ಯಾ ಇವರ ಗೋತ್ರಸ್ಥರಾದ ಪಾಂಡುರಾಯರು, ಇವರ ವಂಶಜರು ಸಹ ೯೦ ವರ್ಷ ಯಥಾ ಪ್ರಕಾರ ಸ್ವಾಸ್ಥ್ಯವನ್ನು ಕೊಯ್ಸಿ ಧರ್ಮವನ್ನು ನಡೆಸಿಕೊಂಡು ಬರುವ ಮೇರೆಗೆ ಕುಂದಕುಂದಾಚಾರ್ಯರಿಗೆ ನೇಮಿಸಿದರು.

ಶಕವರುಷ ೫೬೪ ಪ್ಲವ ಸಂ. ಆರಾಭ್ಯಾ ೮೦ ವ[8]ರ್ಷ[8] ಪರಿಯಂತಕ್ಕು ವೀರ ಪಾಂಡ್ಯರಾಯರು ಇವರ ಮಕ್ಕಳು ಸಹ ಸ್ವಾಸ್ಥ್ಯವನ್ನು ಬಿಟ್ಟುಕೊಟ್ಟು ಇದ್ದಾ ಧರ್ಮವನ್ನು ಕ್ರಮವಾಗಿ ನಡೆಸಿಕೊಂಡು ಬರುವ ಮೇರೆಗೆ ಸಿದ್ಧಾಂತಾಚಾರ್ಯರಿಗೆ ನೇಮಿಸಿದರು.

[9]ಈ[9] ತರುವಾಯ ಶಕವರ್ಷ ೬೪೬ನೆಯ ರುಧಿರೋದ್ಗಾರಿ ಸಂ. ಆರಾಭ್ಯಾ ೫೫ ವರ್ಷ ಪರಿಯಂತ [10]ರಕ್ಕು[10] ಕೂನಪಾಂಡ್ಯರಾಯನೆಂಬುವನು ಪೂರ್ವಮೇರೆಗೆ ಧರ್ಮವನ್ನು ಬಿಟ್ಟುಕೊಟ್ಟು ಈ ಧರ್ಮವನ್ನು [11]ಕ್ರಮವಾಗಿ[11] ನಡೆಸಿಕೊಂಡು

---

2 +(ಮೆ) 3 ಚಕ್ರದಲ್ಲಿ (ಅ) 4 ಪವ (ಅ) 5 ×× (ಅ) 6 +(ಮೆ)
7+(ಬ) 8 ೦ಶ(ಅ) 9 (ಬ) 10 ×(ಅ) 11 +ಸು (ಬ)

ಬರುವ ಮೇರೆಗೆ [12]ಅಮಳ[12] ಕೀರ್ತಿ ಆಚಾರ್ಯರಿಗೆ ನೇಮಿಸಿದರು. ಕೆಲವು ಕಾಲದ ಮೇಲೆ ಈತನು ಜಾತಿಸಂಕರತ್ವವನ್ನು ಪಡೆದು ಮತಾಂತರವನ್ನು ನಿರ್ಮಿಸಿ ಧರ್ಮವನ್ನು ನಷ್ಟಮಾಡಿ[13]ಸಿ[13] ವಂಶವು ಶಿಥಿಲವಾಯಿತ್ತು.

ಈ ಸಮಯದಲ್ಲಿ ಪೂರ್ವದ ಚಾವುಂಡರಾಯರ ವಂಶಜರಾದ ಹಳೇಬೀಡು ಬಿಳಿಕೆರೆ [14]ಗಾ[14]ಡನಹಳ್ಳಿ ಆಂಕನಹಳ್ಳಿ ಮುಂತಾದ ಸ್ಥಳಗಳಲ್ಲಿ ಇದ್ದಂತಾ ಅರಸುಗಳು ಗೊಮ್ಮಟಪುರ ಬಿಳಿಕೆರೆ [15]ಬಿಳ್ಳಳ್ಳಿ[15] ಹಳೇಬೀಡು ಮುಂತಾದ ಸ್ಥಳಗಳಲ್ಲಿ ಬಹಳ ಉತ್ಸಾಹ[ದಿಂದ] ದೇವಸ್ಥಾನ ಕಟ್ಟಿಸಿ ೨ [16]ಮನುಷ್ಯ[16] ಪ್ರಮಾಣ ಗೊಮ್ಮಟೇಶ್ವರಸ್ವಾಮಿಯನ್ನು ಗೊಮ್ಮಟಪುರದ ಬೆಟ್ಟದ ಮೇಲೆ ಪ್ರತಿಷ್ಠೆಯನ್ನು ಮಾಡಿಸಿ ಶ್ರವಣನಹಳ್ಳಿ, ಜಿನ್ನೇನಹಳ್ಳಿ, ಗೊಮ್ಮಟಪುರ, [17]ಹಾ[17]ಡಿನಹಳ್ಳಿಯೆಂದು ಗ್ರಾಮಗಳಿಗೆ ಪ್ರತಿನಾಮಧೇಯವನ್ನು ಇಟ್ಟು ಸ್ವಾಸ್ಥ್ಯವಾಗಿ ಈ ಗ್ರಾಮಗಳ ಕೊಟ್ಟು, ಧರ್ಮ[18]ವ[18] ನಡೆಸಿಕೊಂಡು ಬರುತ್ತಿರುವಲ್ಲಿ, ಈ ಬೆಳ್ಗೊಳದಲ್ಲಿ ನಡೆಯುತಿದ್ದ [19]ಈ[19] ಧರ್ಮವು ಅವತರಿಸಿದ್ದನ್ನು ತಿಳಿದು, [20]ಪ್ರಭು ಹಾಳತವಾಗಿ[20] ತಮಗೆ ನಡೆಯುತ್ತಾಯಿದ್ದ ಗ್ರಾಮಗಳಲ್ಲಿ [21]ಎಂಟು[21] ಗ್ರಾಮ ಕೊಟ್ಟು ಈ ಧರ್ಮವನ್ನು ನಡೆಸಿಕೊಂಡು ಬರುವ ಹಾಗೆ ಅಮಳಕೀರ್ತಿ ಆಚಾರ್ಯರಿಗೆ ನೇಮಿಸಿದರು. ಹೀಂಗೆ ೭೭ ವರುಷ ಪರಿಯಂತಕ್ಕು ನಡೆಸಿಕೊಂಡು ಬಂದರು.

ಈ ತರುವಾಯ ಶಕ ವರುಷ ೭೭೭ನೆಯ ಭಾವ ಸಂ. ಆರಾಭ್ಯ, ಈ ದೇಶವು ಹೊಯ್ಸಳದೇಶಪತಿಗಳಾದ ಜೈನಕ್ಷತ್ರಿಯರಾದ ಹೊಯಿಸಳ ಬಲ್ಲಾಳರ ಅಧೀನವಾದ[ದ್ದ]ರಿಂದಾ ಈ ಬಲ್ಲಾಳರಲ್ಲಿ ಆದಿತ್ಯಬಲ್ಲಾಳನು, ಈ ಕ್ಷೇತ್ರದ ಮಹತ್ವವನ್ನು ಬಿಂಬಾತಿಶಯವನ್ನು ಕೇಳಿ ಈ ಸ್ಥಳಕ್ಕೆ ಬಂದು, ಧರ್ಮ ನಡೆಸಿದ ತರುವಾಯ, ಮಸ್ತಕ ಅಭಿಷೇಕವನ್ನು ಮಾಡಿಸಿ, ಇಲ್ಲಿ ಪೂರ್ವದಲ್ಲಿ ಚಾಮುಂಡರಾಯರು ಮಾಡಿಸಿದ ಧರ್ಮದಲ್ಲಿ ೯೬೦೦೦ ಸಾವಿರ ಸೀಮೆಯನ್ನು ನಡೆಸಿಕೊಟ್ಟು ಈ ಧರ್ಮ ಕ್ರಮವಾಗಿ ನಡೆಯುವಂತೆ ಸೋಮನಂದ್ಯಾಚಾರ್ಯರಿಗೆ ನೇಮಿಸಿದರು. [22]ತರುವಾಯ ಅಮಲಕೀರ್ತಿ ಚೇಲಾಳನು ೫೦೦೦ ಪಗೋಡ ಉತ್ಪನ್ನದ ಭೂಮಿಯನ್ನು ಜಿನಾಲಯಗಳಿಗಿತ್ತು ಶ್ರಿಧಾಮವಿಬುಧನಂದ್ಯಾಚಾರ್ಯರನ್ನು ಮಠದ ಅಧಿಪತಿಗಳನ್ನಾಗಿ ಮಾಡಿದನು. ಇದು ೪೯ ವರ್ಷ ಪರ್ಯಂತ ನಡೆಯಿತು. ಚೇಲಾಳ ಅರಸರಲ್ಲಿ ಮತ್ತೊಬ್ಬ, ಅಂಗರಾಜ, ೫೬ ವರ್ಷಗಳವರೆಗೆ ಇದನ್ನು ಮುಂದುವರೆಸಿ, ಚಂದ್ರಪ್ರಭಸಿದ್ಧಾಂತಾಚಾರ್ಯರನ್ನು ಅಧಿಪತಿಗಳಾಗಿ ನೇಮಿಸಿದನು.[22]

---

12 ಅಮಳಾಂಕ (ಅ) 13 × (ಅ) 14 ಕಾ (ಮ) 15 ಬಾಗಿಲು (ಅ), × (ಬ) 16 ವರುಷ (ಅ), × (ಬ) 17 ಪಾಡೇ (ಅ) 18 ಗಳ (ಅ) 19 (ಬ) 20 ಪ್ರಭೋಗಳ ಅಳಿತದಾಗಿ (ಅ), × (ಮ) 21 ಇಷ್ಟ (ಅ), × (ಬ) 22 ಈ ಭಾಗ ಅ, ಬ ಪ್ರತಿಗಳಲ್ಲಿ ಇಲ್ಲ. ಇದನ್ನು ಇಂಡಿಯನ್ ಆಂಟಿಕ್ವೇರಿ ಸಂಪುಟ ೨ರಿಂದ ಅನುವಾದಿಸಿಕೊಳ್ಳಲಾಗಿದೆ.

ಹೀಗೆ [23]೬೦[23] ವರ್ಷ ನಡೆಯಿತು. ಈ ತರುವಾಯ ಪ್ರತಾಪ ಬಲ್ಲಾಳನು ೬೪ ವರ್ಷ ಯಥಾಪ್ರಕಾರಕ್ಕೆ ಬಿಟ್ಟು ಧರ್ಮವು ನಡೆಯತಕ್ಕ ಬಗ್ಗೆ ತತ್ಕಾಲದ ಗುಣ ಚಂದ್ರಾಚಾರ್ಯರಿಗೆ ನೇಮಿಸಿದರು. [24]ಈ ನಾಲ್ಕು ಜನ ಬಲ್ಲಾಳರು ಈ ಪ್ರಕಾರ ಧರ್ಮವನ್ನು ನಡೆಸಿದರು.[24]

ಉದಯಾದಿತ್ಯನೆಂಬ ಬಲ್ಲಾಳನು, ವೀರಬಲ್ಲಾಳನು, ಗಂಗರಾಜ ಬಲ್ಲಾಳನು ಇವರ ದಿವಸಗಳಲ್ಲಿಯೂ ೫೦೦೦ ಸಾವಿರ ವರಹದ ಸೀಮೆಗಳನ್ನು ನಡೆಸಿಕೊಟ್ಟರು. ಬೆಟ್ಟವರ್ಧ[ನ]ನೆಂಬ ಬಲ್ಲಾಳನು ೫೦ ಸಾವಿರ ವರಹದ ಸೀಮೆಯನ್ನು ೩೧ ವರ್ಷ ಶುಭಚಂದ್ರಾಚಾರ್ಯರಿಗೆ ನೇಮಿಸಿದನು.

ಶಕವರ್ಷ ೧೦೫೩ನೆಯ ದುರ್ಮುಖಿ ಸಂ. ದಲ್ಲಿ ಈ ಬೆಟ್ಟವರ್ಧನನು ರಾಮಾನುಜಾಚಾರ್ಯರ ದುರ್ಬೋಧನೆಯಿಂದ ಇವರ ಕಡೆ ಶ್ರೀ ಮೂಲಕದಿಂದಲ್ಲಿ [25]ಸ[25]ಪ್ತಾಮುದ್ರಾಧಾರಣನಾದ ತರುವಾಯ, ಇವನು ವಿಷ್ಣುವರ್ಧನನೆಂಬ ಹೆಸರು ಪಡೆದು, ಈ ಮತಕ್ಕೆ ಅನಾನುಕೂಲಗಳನ್ನೆ ಮಾಡುತ್ತಾ ಇದ್ದ. ಅತಿ ದ್ವೇಷದಿಂದ ಇಲ್ಲಿಗೆ ನಡೆಯುತ್ತಾ ಇದ್ದ. ಸ್ವಾಸ್ಥ್ಯ ಮುಂತಾದ್ದನ್ನು ನಿಲ್ಲಿಸಿ, ತೊಂಡನೂರು ಮುಂತಾದ ಸ್ಥಳದಲ್ಲಿ [26]೭೯೦[26] ಬಸ್ತಿ ದೇವಸ್ಥಾನವನ್ನು ಮುರಿಸಿ, ಪಂಚನಾರಾಯಣ ಸ್ಥಾಪನೆಯನ್ನು ಮಾಡಿದ್ದು, ಬೇಲೂರಲ್ಲಿ ಚೆನ್ನಿಗನಾರಾಯಣ, ತಲಕಾಡಲ್ಲಿ ಕೀರ್ತಿನಾರಾಯಣ, ವಿಜಾಪುರದಲ್ಲಿ ವಿಜಯನಾರಾಯಣ, ಗದಗದಲ್ಲಿ ವೀರ ನಾರಾಯಣ, ಹರದನಹಳ್ಳಿಯಲ್ಲಿ ಲಕ್ಷ್ಮೀನಾರಾಯಣನೆಂಬುದಾಗಿ ಸ್ಥಾಪಿಸಿ, ಈ ೫ ದೇವಸ್ಥಾನಕ್ಕೆ ಪೂರ್ವದಲ್ಲಿ ಇದ್ದಾ ಬಸ್ತಿ ದೇವಸ್ಥಾನದ ಸ್ವಾಸ್ಥ್ಯವನ್ನೇ ನೇಮಕ ಮಾಡಿಸಿ, ಹಿಂದೆ ಹೇಳಿಯಿರುವ [27]ಬಸ್ತಿ[27]ದೇವಸ್ಥಾನದ ಶಿಲೆಯಲ್ಲಿ ತೊಂಡನೂರು ಕೆರೆಯನ್ನು ಕಟ್ಟಿಸಿ, ಇದಕ್ಕೆ ತಿರುಮಲಸಾಗರವೆಂಬ ಹೆಸರ ಮಾಡಿ, ಜೈನಮತಕ್ಕೆ ನಡೆಯುತ್ತಿದ್ದ ಅಗ್ರಹಾರ [28]ಪುನರ್ವರ್ಗ[28] ಸ್ವಾಸ್ಥ್ಯಮಾನ್ಯಾಯವ ತನ್ನ ಧರ್ಮ ನಷ್ಟಮಾಡಿ ಈ ಕೆರೆಯೊಳಗೆ ತಿರುಮಲಸಾಗರವೆಂಬ ಚತ್ರವೆಂಬುದಾಗಿ ಮಾಡಿಸಿ [29]ರಾಮಾನುಜಕೂಟ[29]ವೆಂಬುದಾಗಿ ಬಹಳ ಜನ ವೈಷ್ಣವರಿಗೆ ಅನ್ನ ನಡೆಯುವಂತೆ ಗೊತ್ತುಮಾಡಿ ದೊಡ್ಡಗುರುಗನಹಳ್ಳಿಗ್ರಾಮವೆಂಬುದನ್ನು ಮೇಲುಕೋಟೆಯೆಂಬುದಾಗಿ[30] ತಿರುಮಲನಾರಾಯಣಪುರವೆಂಬುದಾಗಿ ಹೆಸರನಿಟ್ಟು, ಅನೇಕ ದೇವಸ್ಥಾನ ಅರಮನೆ ಮುಂತಾದನ್ನು ಕಟ್ಟಿಸಿ, ಬೆಟ್ಟಕ್ಕೆ [31]ಸೋಪಾನ[31]ವನ್ನು ಮಾಡಿಸಿದನು. ಹೀಂಗೆ ಕೆಲವು ದಿವಸ ನಡೆಯುತ್ತಾ ಇದ್ದಲ್ಲಿ ರಾಜ್ಯದಲ್ಲಿ [32]ದೇವದ್ರೋಹ ಬಹಳವಾಗಿ ನಡೆದರಿಂದ[33] ಅ[33]ನಿ[33]ಷ್ಟ ಬಹಳವಾಗಿ ನಡೆದು,

---

23 ೬೪ (ಮೆ) 24 × (ಮೆ) 25 ತ(ಮೆ) 26 ×× (ಅ, ಬ) 27 ಕಿತ್ತಾಕಿದ (ಅ) × (ಬ) 28 ಮನವರ್ಗಾ (ಅ) 29 ರಾಮಂಜಕೋಟೆ (ಅ) 30 + ಹೆಸರಿಟ್ಟು ಅನೇಕ ದೇವಸ್ಥಾನ (ಅ) 31 ಗೋವನ (ಅ) 32 + (ಬ) 33 ೦ (ಬ)

ಬೇಲೂರು ತಾಲ್ಲೂಕಿಗೆ ಸೇರಿದ ಅಡಗೂರು [34]ಗ್ರಾಮಾಗ್ರದ[34] ಬಳಿ [35]ಯಲ್ಲಿ ಭೂಮಿ ಬಾಯ್ದೆರೆದು ಅಗಾಧವಾಗಿ ಇದ್ದುಕೊಂಡು[36] ಗ್ರಾಮಭೂಮಿ ಸಹ ನಷ್ಟವಾ [37]ಇರುತ್ತಿರಲು[37] ಈ ವರ್ತಮಾನ ವಿಷ್ಣುವರ್ಧನರಾಯಗೆ ತಿಳಿದು, ಬುದ್ಧಿವಂತರನ್ನು ಕೇಳಿದಲ್ಲಿ, ಬಹಳ ಬಸ್ತಿ ದೇವಸ್ಥಾನ ಮುಂತಾದ್ದು ಕೀಳಿಸಿ[38], ಧರ್ಮನಷ್ಟ ಮಾಡಿದ್ದರಿಂದಾ ಈಪ್ರಕಾರವೆಂದು ಹೇಳಿದ್ದಕ್ಕೆ ಎಲ್ಲಾ ಮತಸ್ಥರನ್ನು ಕರೆಸಿ ಅದಕ್ಕೆ ತಕ್ಕ ಶಾಂತಿ ಆಗದೆ ಮತ್ತು ಹೆಚ್ಚುತ್ತಾ ಹೆಚ್ಚುತ್ತಾ ಬರುವಲ್ಲಿ, ಇದು ಜೈನಮತಸ್ಥರಿಂದ ಆಗಬೇಕೆಂದು ಎಲ್ಲಾ ಮತಸ್ಥರು ಹೇಳಿದ್ದರಿಂದ, ಆತನು ಈ ಜಾತಿಯಲ್ಲಿ ಇದ್ದು: ಮತ್ತೊಂದು ಜಾತಿಗೆ ಸೇರಿದವ[ನ]ಲ್ಲದ ಕಾರಣ, ಈ ಮತಸ್ಥರಿಗೆ ಹೇಳುವದಕ್ಕೆ ಸಂಕೋಚಪಟ್ಟು, ತಾನೇ ಸಮಾಧಾನ ಮಾಡಿಕೊಳ್ಳಬೇಕೆಂದೂ ಮತ್ತು ಬಹಳ ಶಾಂತಿಯನ್ನೂ ಅನೇಕ ದ್ರವ್ಯವನ್ನೂ ಮುಟ್ಟಿಸಿದಾಗ್ಯೂ ದಿನೇದಿನೇ ಹೆಚ್ಚುತ್ತಾ ಬಂದಲ್ಲಿ, ರಾಜ್ಯವೆಲ್ಲಾ ಕೆಟ್ಟುಹೋಗುತ್ತೆಯೆಂದು ಎಲ್ಲಾರು ಬಂದು ಬಹುತರವಾಗಿ ಹೇಳಿಕೊಂಡು ಬೊಬ್ಬೆಯನ್ನು [39]ಅ[39]ವರು ಮಾಡಿದ್ದರಿಂದಾ, ಆವಾಗ ಜೈನಮತಸ್ಥರನ್ನು ಕರೆಸಿ, ಇವರಿಗೆ ಬಹುಪ್ರಕಾರ ಒಡಂಬಡಿಸಿ ಈ ಬಿಟ್ಟವರ್ಧನನು ರಾಮಾನುಜಾಚಾರ್ಯರು ಸಹ ಬೆಳುಗೊಳಕ್ಕೆ ಬಂದು [40]ಬೆಳುಗೊಳದ ಮಠಾಧಿಪತಿಗಳಾದ ಶುಭ ಚಂದ್ರಾಚಾರ್ಯರಿಗೆ ಬಹುತರ ಹೇಳಿಕೊಂಡಲ್ಲಿ[40], ಎಲ್ಲಾ ಮತಸ್ಥರು ಇದ್ದಾರೆ ನಮ್ಮಿಂದ ಏನು ಎಂಬುದಾಗಿ ಹೇಳಿದಲ್ಲಿ, ಒಬ್ಬ ಒಬ್ಬರಿಂದಲೂ ಸಾಗಲಿಲ್ಲಾ ನಿಮ್ಮಿಂದ ಆಗಬೇಕೆಂದು ನಾವು ಎಲ್ಲಾ ಮತಸ್ಥರು ಎಲ್ಲಾ ಬಿರುದುಗಳನ್ನು ನಿಮಗೆ ಕೊಟ್ಟು [41]ಇದಕ್ಕೆ ಬಿಟ್ಟಂಥಾ[41] [42]೧೨೦೦೦ ಸಾವಿರ ಸೀಮೆ[42] ಸ್ವಾಸ್ಥ್ಯವನ್ನು ಕೊಟ್ಟು, ಧರ್ಮವನ್ನು ನಡೆಸಿಕೊಡುತ್ತೇವೆಂದು [42A]ಹೇಳಿ, ವಡಂಬಡಿಸಿ, ಶಿಲಾಶಾಸನವನ್ನು ಹಾಕಿಸಿಕೊಡುತ್ತೇವೆಂದು ಎಲ್ಲಾ ಮತಸ್ಥರು ದೊರೆಗಳು ಸಹ ಹೇಳಿದ್ದರಿಂದ, ವಡಂಬಟ್ಟು ಗಣಧರ ವಲಯ [43]ಕಲಿಕುಂಡಲ[43] ಮಹಾಶಾಂತಿ ಚಕ್ರಾರಾಧನೆ ಮುಂತಾದ್ದನ್ನು ಮಾಡಿಸಿ, ಬೂದಿಗುಂಬಳಹಣ್ಣು ೧೧೦ಲನ್ನು ಮಂತ್ರಿಸಿ[44] ಆ ಭೂಮಿ ಬಾಯ್ದೆರೆದಿರುವದಕ್ಕೆ[45] ದಿನವೊಂದಕ್ಕೆ ಒಂದುಒಂದನ್ನು ಮಂತ್ರಿಸಿ ಹಾಕುತ್ತಾ ಬರಲು, ಭೂಮಿ ತುಂಬುತ್ತಾ ಬಂದು, [46]ಅರ್ಧ ಕುಂಬಳದ ಹಣ್ಣು ನಿಂತಿತು[46] ಆವಾಗ ಎಲ್ಲಾ ಮತಸ್ಥರು ತಮ್ಮ ಬಿರುದುಗಳನ್ನು ಶಿಲಾಶಾಸನಕ್ಕೆ[47]

---

34 +(ಬ) 35 +(ಬ) 36 +ಗ್ರಾಮಭೂಮಿ ಬಾಯಿ ತೆರೆದು ಅಗಾಧವಾಗಿ ಇದ್ದುಕೊಂಡು (ಅ) 37 ಗುತ್ತಾ ಬರಲು (ಬ) 38 +ಬಹಳ (ಬ) 39 ಕೆಲ (ಅ) 40 +ಬಹುತರ ಹೇಳಿಕೊಂಡಲ್ಲಿ (ಅ) ಈ ಭಾಗ (ಅ) (ಬ) ಪ್ರತಿಯಲ್ಲಿ ಸ್ವಲ್ಪ ಹಿಂದು ಮುಂದಾಗಿ ಬಂದಿದೆ 41 +(ಮ) 42 ×(ಮ) 42A ಎಲ್ಲಾ ಮತಸ್ಥರು ದೊರೆ ಸಹ ದೊರೆಗಳು ಸಹ (ಅ) 43 ಕಟ್ಟಿಕೊಂಡ ಚಕ್ರ (ಅ) 44 +ದಿನ ೧ಕ್ಕೆ (ಅ) 45 +೧ದನ್ನು ೧ಡನ್ನು (ಅ) 46 ಅದು ಕುಂಬಳ ಹಣ್ಣಿನಂತಲ್ಲಿ (ಅ) 47 ವನ್ನು (ಅ)

ಹಾಕಿಸಿ ಚಾರುಕೀರ್ತಿ ಪಂಡಿತಾಚಾರ್ಯ[48]ರೆಂಬ[48] ಪ್ರತಿನಾಮಧೇಯವನ್ನು [49]ಕೊ[49]ಟ್ಟರು. ಈ ವೃತ್ತಾಂತ [50]ಶಾಸನದಲ್ಲಿ ಬರದದ್ದು[50] ಇನ್ನೊತ್ತು ಅಡಗೂರು ಬಸ್ತಿದೇವಸ್ಥಾನದಲ್ಲಿ ಇದೆ. ಆ ಭೂಮಿಯು ಈಗಲ್ಲಿ ಗುರುತಾಗಿ ಇದೆ. [51]ಈಗಲೂ[51] ಆ ಊರವರು ಪಾರಂಪರ್ಯವಾಗಿ ಹೇಳುತ್ತಾರೆ. ಈ ಪ್ರಕಾರವಾದ್ದರಿಂದ ಆವಾಗ ಈ ಮತಕ್ಕೂ ಆ ಮತಕ್ಕೂ ಅಭೇದ ಪ್ರತಿಪ್ರತಿಯಾಗಿ ನಡೆಯುವುದು. ಬೆಳ್ಗೊಳದಲ್ಲಿ ಧರ್ಮ ನಷ್ಟವಾದಲ್ಲಿ ವೈಷ್ಣವ ಮತಸ್ಥರು ಮನೆ[52]ಮನೆಗೂ[52] [53]ಒಂದು ಹಣ[53] ಮೇರೆಗೆ ಕೊಟ್ಟುಕೊಂಡು ಈ ಸ್ಥಳದಲ್ಲಿ ನಡೆಸಿಕೊಂಡು ಬರುವದು. ಮೇಲುಕೋಟೆ ಧರ್ಮನಷ್ಟವಾದರೆ ಜೈನಮತಸ್ಥರು ಇದೇ ಮೇರೆಗೆ ನಮ್ಮ ಸಂಸ್ಥಾನಗಳಲ್ಲಿ ಅವರ ಮರ್ಯಾದೆ ಶಾಸನ ಮೇಲುಕೋಟೆಯಲ್ಲಿ ಮರ್ಯಾದೆ ನಮಗೆ [?] ಶಾಸನಗಳು ಸಹ ಹಾಕಿ ಅವ[ನು][54] ಬೆಳ್ಗುಳಕ್ಕೆ ೧೨೦೦೦ ಸಾವಿರ ವರಹದ ಸೀಮೆಯನ್ನು ಸ್ವಾಸ್ಥ್ಯ ಕೊಟ್ಟು ಈ ಧರ್ಮವನ್ನು ಚಾರುಕೀರ್ತಿ ಪಂಡಿತಾಚಾರ್ಯರಿಗೆ ನೇಮಿಸಿದರು.

ಹಾಗೆ ನಡೆಯುತ್ತಾ ಇದ್ದು, ಕೆಲವು ದಿವಸದ ಮೇಲೆ, ಡಿಳ್ಳಿ ಕಡೆಯವರಿಂದಾ ಈ ದೇಶಕ್ಕೆ ಉಪದ್ರವವು ತಟ್ಟಿ, ದಕ್ಷಿಣ ದೇಶ ಮೊದಲಾದ ಸಮಸ್ತವು, ಡಿಳ್ಳಿ ಸ್ವಾಧೀನವಾದ ತರುವಾಯ, ಇಲ್ಲಿ ಧರ್ಮ ಅಂತರಿಸಿದ್ದು, ಶಕವರ್ಷ ೧೫೫೫ನೆಯ ಧಾತು ಸಂ. [ದಲ್ಲಿ] ಆನೆಗುಂದಿ ಬುಕ್ಕರಾಯರ ಆಳಿಕೆ ಆದದ್ದರಿಂದ, ಅವರು ದೇಶ [55]ಕೋಶವನ್ನು[55] ನೋಡಿಕೊಂಡು ಬರುವಲ್ಲಿ, ಈ ಬೆಳ್ಗುಳದ ದೇವರನ್ನು ನೋಡಿ, ಅತಿಶಯಪಟ್ಟು ಪೂಜೋತ್ಸವಗಳಿಗೆ ೩೦೦೦ ವರಹದ ಗ್ರಾಮಗಳನ್ನು [56]ಬಿಟ್ಟು ಕೊಟ್ಟರು.[56] [57]ಅವನ ಮಗ ಸಂಗಮರಾಯ, ಮೊಮ್ಮಗ ಹರಿಹರರಾಯರೂ ಅವನ ಮಾರ್ಗವನ್ನೇ ಅನುಸರಿಸಿದರು.[57] ಈ ಧರ್ಮ ನಡೆಯುವ ಮೇರೆಗೆ ಚಾರು ಕೀರ್ತಿ ಪಂಡಿತಾಚಾರ್ಯರಿಗೆ ನೇಮಿಸಿದರು. [58]ಇದು ೧೨೦ ವರ್ಷದವರೆಗೆ ನಡೆಯಿತು.[58] ಹರಿಹರರಾಯರ ಕುಮಾರ [59]ಪ್ರತಾಪ ರಾಮದೇವರಾಯ[59] ಅವರ ಕುಮಾರ ಪ್ರತಾಪದೇವರಾಯ ಇವರ ಕುಮಾರರು ಮಲ್ಲಿಕಾರ್ಜುನರಾಯರು ಇವರ ಪುತ್ರಪೌತ್ರಪಾರಂಪರ್ಯವಾದ ೧೨ ಬಳದ ತನಕವು [?] ಡಿಳ್ಳಿಯವರಿಗೆ ಅಧೀನಸ್ತರಾಗಿ ಇದ್ದುಕೊಂಡು, ತಮ್ಮ ರಾಜ್ಯವನ್ನು ಪರಿಪಾಲನೆ ಮಾಡಿಕೊಂಡು ಇದ್ದಲ್ಲಿ, ಪೂರ್ವಪ್ರಕಾರ ೩೦೦೦ ವರಹ ನಡೆಸಿಕೊಂಡು ಬಂದು, ಹಿಂದೆ ಹೇಳಿಯಿರುವ ರಾಯರ ವಂಶಸ್ಥರಾದ ಕೃಷ್ಣರಾಯರ ಪುತ್ರರಾದ, ಶ್ರೀರಂಗರಾಯರ ಪರಿಯಂತರಕ್ಕು. ೧೧ ತಲೆ ಮಟ್ಟಿಗೆ ರಾಯರ ವಂಶಜರು, ಶ್ರೀರಂಗಪಟ್ಟಣದಲ್ಲಿ

---

48 ಯೆಂದು (ಅ) 49 ಇ(ಅ) 50 +(ಬ) 51 +(ಬ) 52 ಒಂದಕೆ (ಬ)
53 +(ಅ) 54 ನ (ಮೈ, ಆಸಿ) 55 ದೇಶಗಳನ್ನು (ಬ) 56 ನಡೆಸಿಕೊಂಡು (ಅ)
57 +ಮೆ 58 +ಮೆ 59 +ಮೆ

ಆಳುತ್ತಾ ಇರುವ, ಶಕವರುಷ ೧೫೩೧ನೆಯ ಸೌಮ್ಯ ಸಂ. ರವರಿಗೆ ಈ ಸ್ಥಳಕ್ಕೆ ೧೦೦೦ ವರಹವು ಶ್ರೀರಂಗಪಟ್ಟಣ ದೊರೆಗಳಿಂದ ನಡೆಯುತ್ತ ಇತ್ತು.

ಶಕವರ್ಷ ೧೫೩೨ನೆಯ ಸಾಧಾರಣ ಸಂ. ಮೈಸೂರು ದೊರೆಗಳಾದ [60]ರಾಜ ವಡೆಯರವರು ಶ್ರೀರಂಗಪಟ್ಟಣವನ್ನು ಸ್ವಾಧೀನ ಮಾಡಿಕೊಂಡು ರತ್ನಸಿಂಹಾಸನಾರೂಢರಾದ ತರುವಾಯ, ಪೂರ್ವದಲ್ಲಿ ಶ್ರೀರಂಗರಾಯರು ನೆಡೆಸುತ್ತಾಯಿದ್ದ ೧೦೦೦ ವರಹವನ್ನೆ ಇವರು ನಡೆಸಿಕೊಂಡು ಬಂದು, ಅದರಾರಭ್ಯ ಇವರ ಆಳಿಕೆ ೮ ವರುಷವಾದ ತರುವಾಯ ಇವರ ಕುಮಾರರು ನರಸರಾಜ ವಡೆಯರು [61]ಅವರ[61] ಕುಮಾರ ಚಾಮರಾಜ ವಡೆಯರು ಶಕವರ್ಷ ೧೫೪೦ನೆಯ ಕಾಳಯುಕ್ತಿ ಸಂ. ಪಟ್ಟಾಭಿಷೇಕವಾಗಿ ೧೨ ವರ್ಷ ಆಳಿದರು. ಶಕವರ್ಷ ೧೫೫೨ನೆಯ ಶುಕ್ಲ ಸಂವತ್ಸರದಲ್ಲಿ ಚಾಮರಾಜ ವಡೆಯರು ಸಿಂಹಾಸನಾರೂಢರಾಗಿ ೮ ವರ್ಷ ರಾಜ್ಯವಾಳಿದರು. [62]ಇಮ್ಮಡಿ ರಾಜ ವಡೆಯರು ಸಿಂಹಾಸನಕ್ಕೆ ಬಂದು ಎರಡು ವರ್ಷ ರಾಜ್ಯವಾಳಿದರು.[62] ಶಕವರ್ಷ ೧೫೬೨ನೆಯ ಪ್ರಮೋದಿತ ಸಂ. ಕಂಠೀರವ ನರಸರಾಜ ವಡೆಯರು [63]೨೧[63] ವರ್ಷ ರಾಜ್ಯ ಪರಿಪಾಲನೆ ಮಾಡಿದ್ರು. ಇಲ್ಲಿಗೆ ಮೈಸೂರು ದೊರೆಗಳ ಜನ ೩ಕ್ಕೆ, ವರ್ಷ ೫೧ ಪರಿಯಂತಕ್ಕು, ೧೦೦೦ ವರಹದ ಗ್ರಾಮವನ್ನು ನಡೆಸುತ್ತಾ ಬಂದು, ಶಕವರ್ಷ ೧೫೮೨ನೆಯ ಶರ್ವಾರಿ ಸಂ. ದೊಡ್ಡದೇವರಾಜ ವಡೆಯರು ಸಿಂಹಾಸನಾರೂಢರಾಗಿ ೧೪ ವರ್ಷ ರಾಜ್ಯವನ್ನಾಳುತ್ತಾ ಇರುವಲ್ಲಿ, ಬೆಳ್ಗೊಳದಲ್ಲಿ ಗೊಮ್ಮಟೇಶ್ವರಸ್ವಾಮಿ ಅತಿಶಯೋನ್ನತಿಯನ್ನೂ ಕ್ಷೇತ್ರಮಹತ್ತನ್ನೂ ಬೆಳ್ಗೊಳಕ್ಕೆ ಹೋಗಿ ನೋಡಿ, ಅತಿಶಯಬಟ್ಟು, ಶಕವರ್ಷ ೧೫೯೪ನೆಯ ಪರಿಧಾವಿ ಸಂವತ್ಸರದ ಪುಷ್ಯ ಶು. ೧೦ಲ್ಲು, ಸ್ವಾಮಿಗೆ ಮಸ್ತಕಾಭಿಷೇಕವನ್ನು ಮಾಡಿಸಿ, ಜೀರ್ಣೋದ್ಧಾರಕ್ಕೆ ಅನೇಕ ದ್ರವ್ಯಗಳನ್ನು ಕೊಟ್ಟು, ಪೂರ್ವಮೇರೆಗೆ ನಡೆಯುತ್ತಿದ್ದ ೧೦೦೦ ವರಹ ಗ್ರಾಮುಗಳು ಹೊರತು, ಅಲ್ಲಿ ಚಾರುಕೀರ್ತಿ ಪಂಡಿತಾಚಾರ್ಯರ ಮಠಕ್ಕೆ ಮದನೆಯೆಂಬ ಗ್ರಾಮವನ್ನು ಸ್ವಾಸ್ಥ್ಯವಾಗಿ ಬಿಟ್ಟು, ಶಿಲಾಶಾಸನವನ್ನು [64]ಹಾಕಿಸಿ[64], ಧರ್ಮವ ನಡೆ[65]ಯು[65]ವಂತೆ ಮಾಡಿದರು. ಶಕವರ್ಷ ೧೫೯೭ನೆಯ ಆನಂದ ಸಂವತ್ಸರದಲ್ಲಿ, ಚಿಕ್ಕದೇವರ್ರಾಜ ವಡೆಯರು, ಸಿಂಹಾಸನಾರೂಢರಾಗಿ ಕೇರಳದೇಶ ಮುಂತಾದ ರಾಜ್ಯಭಾರಗಳನ್ನು ಸ್ವಾಧೀನ ಮಾಡಿಕೊಂಡು, ಬಹುದರ್ಪದಲ್ಲಿ ೩೧ ವರ್ಷ ರಾಜ್ಯ ಪರಿಪಾಲನೆ ಮಾಡಿಕೊಂಡು ಇರುವಲ್ಲಿ, ಬೆಳ್ಗುಳಕ್ಕೆ ಬಂದು, ದೇವಸ್ಥಾನಗಳ ದೊಡ್ಡ ದೇವರ ಮಂಠಾದನ್ನು ನೋಡಿ ಸಂತೋಷಬಟ್ಟು, ಮಸ್ತಕಾಭಿಷೇಕ ಪೂಜೆ ಮಾಡಿಸಿ ಇದ್ದು ಆ ಸ್ಥಳದಲ್ಲಿ ತಮ್ಮ ಹೆಸರಿನಿಂದಾ ಬಹುಕಾಲ ಹೆಸರು ನಡೆಯಬೇಕೆಂದು,

---

60 + ಕೃಷ್ಣ (ಅ) 61 + ಮ 62 + (ಮ) 63 ೧೨ (ಮ) 64 ಸ್ಥಾಪಿಸಿ (ಬ)
65 ಸು(ಅ)

ದೊಡ್ಡ ಕಲ್ಯಾಣಿ ಕಟ್ಟಿಸಿ, ಆದಕ್ಕೆ ಗೋಪುರಸಮೇತ ಪ್ರಾಕಾರವನ್ನು ಕಟ್ಟಿಸಿ, ಅನೇಕ ಚೈತ್ಯಾಲಯವನ್ನು ಜೀರ್ಣೋದ್ಧಾರ ಮಾಡಿಸಿ, ಪೂರ್ವದಲ್ಲಿ ನಡೆಯುತ್ತಿದ್ದ ೧೦೦೦ ಸಾವಿರ ವರಹದ ಗ್ರಾಮುಗಳನ್ನು ಮಠಕ್ಕೆ ಪೂರ್ವದಲ್ಲಿದ್ದ ಮದನೆಯೆಂಬ ಗ್ರಾಮವನ್ನು ನಡೆಸಿಕೊಟ್ಟು, ಪ್ರಯಾಣ ತೆರಳಿಸಿ ಬಂದು ರಾಜ್ಯಾಧಿಕಾರವನ್ನು ಮಾಡಿದರು. ೧೬೨೭ನೆಯ ಪಾರ್ಥಿವ ಸಂ. ಚಿಕ್ಕದೇವರಾಜ ಒಡೆಯರ ಮಕ್ಕಳು, ಕಂಠೀರವರಾಯರು ೮ ವರ್ಷ ರಾಜ್ಯವನ್ನಾಳುವಲ್ಲಿ, ಯಥಾಪ್ರಕಾರಕ್ಕೆ ೧೦೦೦ ವರಹದ ಗ್ರಾಮುವನ್ನು ಮಠಕ್ಕೆ ನಡೆಯುತ್ತಾ ಇದ್ದ ಗ್ರಾಮು ಸಹಾ ಬಿಟ್ಟು ಈ ಗ್ರಾಮುವು ಧರ್ಮವು ಕಾಲವರಿತು ನಡೆಸುವ ಮೇರೆಗೆ ಚಾರುಕೀರ್ತಿ ಪಂಡಿತಾಚಾರ್ಯರಿಗೆ ನೇಮಿಸಿದರು.

ಶಕವರುಷ ೧೬೩೫ನೆಯ ವಿಜಯ ಸಂ. ದೊಡ್ಡ ಕೃಷ್ಣರಾಜ ವಡೆಯರು[66] ಸಿಂಹಾಸನಾರೂಢರಾಗಿ ೧೮ ವರ್ಷ ರಾಜ್ಯಪರಿಪಾಲನೆ ಮಾಡುವ ಸಮಯದಲ್ಲಿ, ಬೆಳ್ಗುಳಕ್ಕೆ ಬಂದು, ಮಸ್ತಕಾಭಿಷೇಕ ಪೂಜೋತ್ಸವ ಜೀರ್ಣೋದ್ಧಾರ ಮುಂತಾಗಿ ಮಾಡಿಸಿ, ೧೦೦೦ ವರಹದ ಗ್ರಾಮುವನ್ನು ದೇವರಿಗೆ ನೇಮಿಸಿ, ಪಟ್ಟಕ್ಕೆ ಪೂರ್ವದಲ್ಲಿ ಇದ್ದ ಮದನೆಯೆಂಬ ಗ್ರಾಮು.[66] ಪುನಃ ಕಬಾಳುಯೆಂಬ ಗ್ರಾಮುವ ಸಹ ಕೊಟ್ಟು, ದೇವರ ಕೆಲಸ ಮುಂತಾದ್ದು ನಡೆಯುವ ಮೇರೆಗೆ, ಚಾರುಕೀರ್ತಿ ಪಂಡಿತಾಚಾರ್ಯರಿಗೆ ನೇಮಿಸಿದರು. ಶಕ ವರುಷ ೧೬೫೩ನೆಯ ವಿರೋಧಿಕೃತ ಸಂವತ್ಸರದಲ್ಲಿ ಚಿಕ್ಕೇನಹಳ್ಳಿ ಸ್ಥಳದ ಚಾಮರಾಜರು ಪಟ್ಟಾಭಿಷೇಕವಾದ ಕಾರಣ ೨ ವರ್ಷ ಪರಿಯಂತ ಪಟ್ಟ ನಡೆಯಿತು. ಶಕವರ್ಷ ೧೬೫೮ನೆಯ ಆನಂದ[67] ಸಂವತ್ಸರದಲ್ಲಿ ಇಮ್ಮಡಿ ಕೃಷ್ಣರಾಜ ವಡೆಯರಿಗೆ ಪಟ್ಟವಾಗಿ ರಾಜ್ಯವನ್ನಾಳುತ್ತಾ ಇರುವಲ್ಲಿ ಪೂರ್ವ ಮೇರೆಗೆ, ಈ ಸ್ಥಳಕ್ಕೆ ಗ್ರಾಮಭೂಮಿಗಳು ೧೦೦೦ ವರಹಕ್ಕೆ ಸರಿಯಾಗಿ ಈ ಮಠ [68]ಮದನೆಯೆಂಬ ಗ್ರಾಮ, ಕಬ್ಬಾಳುಯೆಂಬ ಗ್ರಾಮುವನ್ನು[68] ನಡೆಸಿ ಕೊಂಡು ಬಂಧರು. ಇವರಿಗೆ ೩೦ ವರ್ಷ ಇರುವದಾಗಿ ಇತ್ತು. ಶ. ೧೬೮೮ನೆಯ ವ್ಯವಸಂವತ್ಸರದಲ್ಲಿ ಮುಕ್ತರಾದ ತರುವಾಯ, ಬೆಟ್ಟದ ಚಾಮರಾಜ ವಡೆಯರವರು ಇವರ ದಿವಸದಾರಾಭ್ಯಾ ದೊಡ್ಡನವಾಬರ ದಿವ್ಸದಲ್ಲಿ, ಪೂರ್ವಪ್ರಕಾರಕ್ಕೆ ೧೦೦೦ ಸಾವಿರ ವರಹದ ಗ್ರಾಮುಗಳು, ಮಠದ ೨ ಗ್ರಾಮುಗಳು, ಸಹ ನಡೆದು ಬಂತು. ಶ. ೧೭೦೮ನೆಯ ವಿಶ್ವವಸುನಾಮ ಸಂ. ದಲ್ಲಿ ಟಿಪ್ಪುಸುಲ್ತಾನರು [69]ದೇವಾದಾಯ ಬ್ರಹ್ಮಾದಾಯ[69]ವನ್ನು ಜೀರ್ಣ ಮಾಡಿದರು. ಈ ತರುವಾಯ ಚೆನ್ನಪಟ್ಟಣ ಕುಂಪಣಿ ದೊರೆಗಳಾದ [70]ವೆಲ್ಲೆಸ್ಲಿ[70] ಸಾಹೇಬರು ಕುಲಿಶಾಬಹದ್ದೂರವರು ಮುಂತಾದವರು ಫೌಜ ತಕ್ಕೊಂಡು ಬಂದು, ಶ. ೧೭೨೧ ಸಿದ್ಧಾರ್ಥಿ ಸಂವತ್ಸರ ಚೈತ್ರ

---

66 +೧೮ ವರ್ಷ(ಅ) 67 + ನಾಮ (ಅ) 68 ಮದ್ದನೆ ಕಬ್ಬಾಳು ಈ ಗ್ರಾಮುಸ್ಥರನ್ನು (ಅ) ×ಬ 69 ದೇವರಯ ಬ್ರಹ್ಮಣ ದಾಯ (ಅ) ×ಬ 70 —(ಮ)

ಬಹುಳ ೩೦ ದಿವ್ಸ ಶ್ರೀರಂಗಪಟ್ಟಣವನ್ನು ಸ್ವಾಧೀನ ಮಾಡಿಕೊಂಡ ತರುವಾಯ ಸಿದ್ಧಾರ್ಥಿ ಸಂವತ್ಸರ ಜ್ಯೇಷ್ಠ ಬಹುಳ ೧೩. ಭಾನುವಾರದಲು [71]ಸಿಂಹಾಸನಕ್ಕೆ ದೊರೆಗಳಾದ ಕೃಷ್ಣರಾಜ ವಡೆಯರಿಗೆ ಪಟ್ಟಾಭಿಷೇಕವ ಮಾಡಿಸಿ, ಪೂರ್ಣಯ್ಯ ನವರಿಗೆ ದಿವಾನಗಿರಿ ನೇಮಕ ಮಾಡಿಸಿ ಕುಂಪಣಿ ದೊರೆಗಳು ಶ್ರೀರಂಗಪಟ್ಟಣದಲ್ಲಿ ಇದ್ದಲ್ಲಿ [72]ಮುಂದಕ್ಕೆ ನಡೆಯಬೇಕು ಇಲ್ಲಿಗೆ ಈ ಬರೆದು ಇರುತ್ತೆ.[72] *

---

71 ಈ ಸಂಸ್ಥಾನಕ್ಕೆ (ಬ) 72 ನಮ್ಮ ಸ್ವಾಸ್ಥ್ಯಮಾನ್ಯಂಗಳ ವಿಚಾರಕ್ಕೆ ಕುಂಪಿಣಿ ದೊರೆಗಳಿಗೆ ಅರಿಕೆ ಮಾಡಿಕೊಳ್ಳುವುದಕ್ಕೆ ಸಂದರ್ಭವಿಲ್ಲದೆ ಯಿದ್ದ ಕಾರಣ ಪೂರ್ವದ ಸ್ವಾಸ್ಥ್ಯಮಾನ್ಯಗಳಿಗೆ ಅನುಕೂಲವಿಲ್ಲದೆ ಇತ್ತು. ಈ ತರುವಾಯ ತಾಬ್ರಿ ಸಂವತ್ಸರದಲ್ಲಿ ದಿವಾನರು ಪೂರ್ಣಯ್ಯನವರು ಮೇಲುಕೋಟೆ ನಂಜನಗೂಡು ಮುಂತಾದ ಸ್ಥಳ (ಬ).

* ('ಬ') ಬೆಂಗಳೂರು ವಿಶ್ವವಿದ್ಯಾಲಯದ ಪ್ರತಿ ತೃಟಿತ. ಇದರ 6, 8, 10, 19, 21, 22, 23, 25, 28, 32, 33, 34, 36 ಗರಿಗಳು ಮಾತ್ರ ಇವೆ.

('ಮ') Indian Antiquary, Vol. II, p. 129ದಲ್ಲಿ ಕ್ಯಾಪ್ಟನ್ ಜೆ. ಎಸ್. ಎಫ್. ಮೆಕೆಂಜಿ ಅವರ ಇಂಗ್ಲಿಷ್ ಅನುವಾದದ ಭಾಗಗಳನ್ನು ಕನ್ನಡಕ್ಕೆ ಪರಿವರ್ತಿಸಿ ಕೊಂಡುದು.

('ಅ') ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಪರವಾಗಿ ಡಾ॥ ಎಂ.ಎಂ. ಕಲಬುರ್ಗಿ ಅವರು ಕೈಗೆತ್ತಿಕೊಂಡ ಕರ್ನಾಟಕ ಕೈಫಿಯತ್ತುಗಳ ಪ್ರಕಟನಾ ಯೋಜನೆಯ ಅಂಗವಾಗಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡಅಧ್ಯಯನಸಂಸ್ಥೆಯಿಂದ (No. KB 710/1) ಪ್ರತಿ ಮಾಡಿಸಿ ತರಿಸಿಕೊಂಡ ಹಸ್ತಪ್ರತಿ.

# ಗದುಗಿನ ಭಾರತದಲ್ಲಿ ಯುದ್ಧವರ್ಣನೆಗಳು

ಡಾ|| ಕೆ. ಶ್ರೀಕಂಠಯ್ಯ

ಸಮರಕ್ಕೆ ಸಂಬಂಧಿಸಿದಂತೆ ಅಪಾರ ಸಾಹಿತ್ಯವು ಕನ್ನಡ ಸಾಹಿತ್ಯ ಕೃತಿಗಳಲ್ಲಿ ದೊರೆಯುತ್ತದೆ.[1] ಅದರಲ್ಲಿ ಗದುಗಿನ ಭಾರತದಲ್ಲಿ ಬರುವ ಯುದ್ಧಪಂಚಕ[2]ಗಳೆಂದು ಹೆಸರಾದ ಕಡೆಯ ಐದು ಪರ್ವಗಳು ಗಮನಾರ್ಹ. ಕುಮಾರವ್ಯಾಸನು ಮೂಲ ಭಾರತದ ಕಥೆಯಲ್ಲಿ ಅನೇಕ ಮಾರ್ಪಾಡುಗಳನ್ನು ಮಾಡಿಕೊಂಡಿದ್ದು ಸಮಕಾಲೀನ ಚಿತ್ರಗಳನೇಕವನ್ನು ತನ್ನ ಕೃತಿಯಲ್ಲಿ ಮೂಡಿಸಿದ್ದರೂ ಚತುರಂಗಬಲ ಮುಂತಾದ ಅನೇಕ ವಿಚಾರಗಳಲ್ಲಿ ಮೂಲಭಾರತದಲ್ಲಿರುವಂತೆಯೇ ಹೇಳಿರುವುದನ್ನು ಗಮನಿಸ ಬಹುದು. ರಾಜರು ಯುದ್ಧರಂಗದಲ್ಲೇ ಆಗಲೀ ಬೇರೆಡೆಗಳಿಗೆ ಹೋದಾಗಲಾಗಲೀ ಆನೆ ಕುದುರೆ ರಥ ಕಾಲಾಳುಗಳಿಂದ ಕೂಡಿದ ಚತುರ್ಬಲವನ್ನು ಉಪಯೋಗಿಸು ತ್ತಿದ್ದುದಾಗಿ ಹೇಳುತ್ತಾನೆ. ಮಹಾಭಾರತ ಯುದ್ಧದ ಅನೇಕ ವಿವರಗಳನ್ನು ಕವಿ ಕೈಬಿಡುವಂತಿರಲಿಲ್ಲ. ಆದರೂ ಅವನು ಕೊಡುವ ಅನೇಕ ಯುದ್ಧವಿವರಗಳು ಸಮಕಾಲೀನ ಚಿತ್ರವನ್ನು ಮುಂದಿಡುತ್ತವೆ. ಉದಾಹರಣೆಗೆ, ಸುಪ್ರತೀಕ ಗಜದ ಸಜ್ಜನ ವಿವರವನ್ನು ಗಮನಿಸಬಹುದು.[3]

ಸಮರಕ್ಕೆ ಸಂಬಂಧಿಸಿದಂತೆ—ಸೈನಿಕರ ಉಡಿಗೆ ತೊಡಿಗೆಗಳು, ಆಯುಧಗಳು, ಸಂರಕ್ಷಕ ಸಾಧನಗಳು, ಸಮರಕ್ಕೆ ಮುನ್ನ ಬೀಳ್ಕೊಡಿಗೆ ಬಲಿ, ದಾನ, ರಣವೀಳ್ಯ, ದಂಡಯಾತ್ರೆ, ಸೇನಾಶಿಬಿರ, ಸಮರತಂತ್ರ, ಸೈನಿಕರನ್ನುದ್ದೇಶಿಸಿ ಭಾಷಣ, ಸಮರದಲ್ಲಿ ಚಿಕಿತ್ಸೆ, ಸಮರದ ನಂತರ ರಣರಂಗ, ಸಮರಸಂಹಿತೆ — ಇವೇ

---

1 ನೋಡಿ—ಬೆಟಗೇರಿ ಕೃಷ್ಣಶರ್ಮ : ಕರ್ಣಾಟಕ ಜನಜೀವನ, ಪುಟ ೧-೬೪ (ಕಜಜೀ.)

2 ಭೀಷ್ಮ, ದ್ರೋಣ, ಕರ್ಣ, ಶಲ್ಯ ಗದಾ—ಪರ್ವಗಳು, ಕರ್ಣಾಟ ಭಾರತ ಕಥಾಮಂಜರಿ— ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ೧೯೫೮

3 ನೋಡಿ—ಗಭಾದ್ರೋ. ಸಂಧಿ ೩

ಮುಂತಾದ ವಿಷಯಗಳ ಬಗೆಗೆ ಕವಿ ಕೊಡುವ ವರ್ಣನೆಗಳು ಅನೇಕ ವಾಸ್ತವಾಂಶಗಳಿಂದ ಕೂಡಿವೆ ಮತ್ತು ಕೆಲವು ಸಂದರ್ಭಗಳಲ್ಲಿ ಐತಿಹಾಸಿಕ ದಾಖಲೆಗಳಿಂದ ನುಸುಳಿಕೊಂಡ ಅನೇಕ ವಿಷಯಗಳ ಕಡೆಗೆ ನಮ್ಮ ಗಮನವನ್ನು ಸೆಳೆಯುವುದೂ ಉಂಟು.

ಕೋಟೆ: ಅಷ್ಟಾದಶ ವರ್ಣನೆಗಳಲ್ಲಿ ಪುರವರ್ಣನೆಗೆ ಉಪಾಂಗವಾಗಿ ಕೋಟೆಯ ಅಂಗಾಂಗಗಳ ವರ್ಣನೆಯೂ ಯುದ್ಧವರ್ಣನೆಯ ಉಪಾಂಗವಾಗಿ ಕೋಟೆಗಾಳಗದ ವರ್ಣನೆಯೂ ಬಂದಿರುವುದು.[4] ಕವಿ ಕೊಡುವ ಪುರವರ್ಣನೆಯ ಚಿತ್ರದಲ್ಲಿ ಪ್ರಾಸಂಗಿಕವಾಗಿ ಬರುವ ಕೋಟೆಯ ಈ ವರ್ಣನೆಯಲ್ಲಿ ಅಗಳು-ಹುಲಿಮೊಗ[5]-ತೆನೆ ಮುಂತಾದ ದೇಶ್ಯ ಪ್ರಯೋಗಗಳನ್ನು ಕಾಣಬಹುದು.

"ಅರರೆ ಪಾತಾಳದ ವಿಳಾಸಿನಿಯರಿಗೆ ಚೌಕಿಗೆಯೋ ಸುದುರ್ಗದ ಹಿರಿಯಗಳೊ ಬಲುಗೋಟೆಯೋ ನಿಚ್ಚಣಿಕೆಯೋ ದಿವದ ಮುರಿಮುರಿದ ಹುಲಿಮುಖದ ಹೇಮದ ತರತರದ ತೆನೆಗಳ ವಜ್ರಮಯ ಬಂಧುರ ಕವಾಟಸ್ಫುಟದಲೆಸೆದುದು ಹಸ್ತಿನಾನಗರ" (ಗಭಾಉ. ೭-೨೮).

ಪಾಳೆಯ ಸಂರಕ್ಷಕ ಸಾಧನಗಳು: ಸೈನಿಕರು ಶತ್ರುವಿನ ಕೋಟೆಯನ್ನು ಮುತ್ತಿಗೆ ಹಾಕಲು ಬಂದಾಗ; ತಮ್ಮ ಬೀಡಿನ ಸುತ್ತ ಶತ್ರುಗಳಿಂದ ರಕ್ಷಿಸಿಕೊಳ್ಳಲು ಪಾಳೆಯ ಸಂರಕ್ಷಕ ಸಾಧನವಾಗಿ ದೊಡ್ಡದೊಡ್ಡ ಮರದ ದಿಮ್ಮಿಗಳನ್ನು ಸುತ್ತಲೂ ನಿಲ್ಲಿಸಿ ಅವುಗಳಿಗೆ ಮುಳುವೇಲಿ (ತಳ)ಗಳನ್ನು ಬಿಗಿಯುತ್ತಿದ್ದರು.[6]

---

4 ಕಜಜೀ, ಪು. ೧ ರಿಂದ ೭

5 ಹುಲಿಮುಖ (ಹುಲಿಮೊಗ) ಕೋಟೆಯ ಹೆಬ್ಬಾಗಿಲಿಗೆ 'ಹುಲಿಮೊಗ' ಎಂದು ಹೆಸರು. ಪ್ರಾಣಿವರ್ಗದಲ್ಲಿ ಹುಲಿಗಿರುವ ಸ್ಥಾನ ದೊಡ್ಡದು. ಕೋಟೆಯ ಭವ್ಯತೆ, ಭೀಕರತೆಯ ಮೂಲಕ ಅದನ್ನು ದೊಡ್ಡ ಹುಲಿಯೆಂದು ಕಲ್ಪಿಸಿ ಅದರ ಹೆಬ್ಬಾಗಿಲನ್ನು 'ಹುಲಿಮೊಗ' ವೆಂದು ಕರೆದಿದ್ದಾರೆ. ಈ ಹೆಬ್ಬಾಗಿಲನ್ನು ಪ್ರವೇಶಿಸುವ ಶತ್ರುಸೈನಿಕರು ಹುಲಿಯ ಬಾಯಿಗೆ ಬಿದ್ದಂತೆಯೇ ಎಂಬ ಭಾವನೆಯುಂಟಾಗುವಷ್ಟು ಅಲ್ಲಿ ತೀಕ್ಷ್ಣವಾದ ಶಸ್ತ್ರಾಸ್ತ್ರಗಳೂ ಜಾಗ್ರತೆಯಿಂದ ಕಾವಲೂ ಇರುತ್ತಿದ್ದವೆಂದು ಹೇಳುತ್ತಾ, ಕನಕದಾಸರು ಮೋಹನತರಂಗಿಣಿಯಲ್ಲಿ (೨೦-೧೧) ಹೆಬ್ಬಾಗಿಲಿನ ಎರಡೂ ಕಡೆಯ ಕೊತ್ತಳಗಳು ನಿಂತ ಎರಡು ಹುಲಿಗಳೆಂದೂ ಅಗಸೆಯ ಬಾಗಿಲು (ಊರ ಬಾಗಿಲು) ಅವುಗಳ ಬಾಯಿಯೆಂದೂ ವರ್ಣಿಸಿರುವರು (ಕಜಜೀ, ಪು. ೧೧).

6 ನ್ಯೂನಿಜ್ ಎಂಬ ವಿದೇಶೀ ಪ್ರವಾಸಿಯು ವಿಜಯನಗರಕ್ಕೆ ಭೇಟಿ ಇತ್ತ ತನ್ನ ವರದಿಯಲ್ಲಿ ರಾಯಚೂರು ಯುದ್ಧವನ್ನು ವರ್ಣಿಸುತ್ತಾ ಹೇಳುವ "ದಂಡು ಬೀಡುಬಿಟ್ಟಿದ್ದ ರಾಜನ ಡೇರೆಯ ಸುತ್ತ ಮುಳ್ಳಿನ ದೊಡ್ಡ ಬೇಲಿ ಹಾಕಿ ಒಂದು ಕಡೆ ಮಾತ್ರ ಬಾಗಿಲು ಬಿಟ್ಟಿದ್ದರು. ಬಾಗಿಲನ್ನೂ ಸುತ್ತಮುತ್ತಣ ಪ್ರದೇಶವನ್ನೂ ರಕ್ಷಣಾ ಪಡೆಯವರು ಶಿಸ್ತಿನಿಂದ ಕಾಯುತ್ತಿದ್ದರು" (ಪ್ರವಾಸಿ ಕಂಡ ಇಂಡಿಯಾ, ಭಾಗ ೩, ಪು. ೪೯೮) ಎಂಬ ಹೇಳಿಕೆ ಸಾರಣಪ್ಪನ ವರ್ಣನೆಗೆ ಹತ್ತಿರವಾಗಿದೆ ಎಂದು ಹೇಳಬಹುದಲ್ಲವೆ?

ಭೀಷ್ಮಪರ್ವದಲ್ಲಿ ಕವಿ ಕುರುಬಲದ ಪಾಳಯವನ್ನು ವರ್ಣಿಸುತ್ತಾ, "ಗುಡಿಗಳನು ಬೀಸಿದರು ಲೋಹದ ತಡಿಕೆಗಳನಳವಡಿಸಿ ಬೀಡಿನ ನಡುವೆ ರಚಿಸಿದರವನೀಪಾಲನ ಮಂದಿರವ"...."ಅಳವಿನಾಲ್ವತ್ತೆಂಟರೊಳಗಿಟ್ಟಳಿಸಿ ಬಿಟ್ಟುದು ಸೇನೆ, ಕೋಂಟಾವಳಿಯ ಆಗಳಲ್ಲಲ್ಲಿ ತಳಿಮುಳುವೇಲಿ ಪಡಿಯಗಳು....ಮೆರೆದುವು" (ಗಭಾಭೀ. ೧–೫೧, ೫೨) ಎಂದು ಪಾಳಯವನ್ನು ಸಂರಕ್ಷಿಸುತ್ತಿದ್ದ ವಿಧಾನವನ್ನು ಹೇಳುತ್ತಾನೆ.

ಗಜಸೇನೆ: ಗದುಗಿನ ಭಾರತದಲ್ಲಿ ದೊರೆಯುವ ಸಮರಚಿತ್ರಗಳಲ್ಲಿ ಗಜಸೇನೆಯೂ ಒಂದು. ನಾರಣಪ್ಪ ಕೊಡುವ ರಣಾಂಗಣದ ಒಂದು ಚಿತ್ರದಲ್ಲಿ (ಗಭಾಭೀ. ೪–೨೦) ಕನಕಗಿರಿ, ಅಂಜನಗಿರಿ, ವಿಂಧ್ಯಗಿರಿ, ಮಲಯಾದ್ರಿಯಲ್ಲಿ ಜನಿಸಿದ ಗಜಸೇನೆ ಇತ್ತೆಂಬ ವಿಷಯ ತಿಳಿದುಬರುತ್ತದೆ.

ಸಮರದಾನೆಗಳಿಗೆ ಮಾಡುತ್ತಿದ್ದ ಸಿದ್ಧತೆಗಳಲ್ಲಿ ಆನೆಯ ಮೇಲೆ ಅಂಬಾರಿಯನ್ನು ಬಿಗಿದು ಅದರಲ್ಲಿ ಯೋಧರು ಶಸ್ತ್ರಸಜ್ಜಿತರಾಗಿ ಕುಳಿತುಕೊಳ್ಳುವ ವ್ಯವಸ್ಥೆಯೂ ಒಂದು. "ದಂತಿಗಳ ಹೆಗಲಲಿ ನಿಡುನೊಗನ ಕಟ್ಟಿದರು" (ಗಭಾದ್ರೋ. ೮–೪೫) ಎಂಬ ನಾರಣಪ್ಪನ ಹೇಳಿಕೆ ಬಹುಶಃ ಆನೆಯ ಮೇಲೆ ಜೋಡಿಸಿದ ಅಂಬಾರಿಯನ್ನೇ ಸೂಚಿಸುವುದೆಂದು ಹೇಳಬಹುದು. 'ಆನೆಯ ಮೇಲೆ ಅಂಬಾರಿಯನ್ನು ಬಿಗಿದು ಅದರಲ್ಲಿ ಶಸ್ತ್ರಸಜ್ಜಿತರಾದ ಯೋಧರು ಕುಳಿತು ಯುದ್ಧ ಮಾಡುತ್ತಿದ್ದರು ಹಾಗೂ ಆನೆಯ ಸೊಂಡಿಲಿಗೆ ಚೂಪಾದ ಕತ್ತಿಯನ್ನು ಕಟ್ಟಿರುತ್ತಿದ್ದರು—ಎಂದು ಹೇಳಿರುವ ಪ್ರವಾಸಿಗಳ ವರದಿಗೆ ಕವಿಗಳ ವರ್ಣನೆಯಲ್ಲಿ ಸ್ಪಷ್ಟನೆ ದೊರೆಯುತ್ತದೆ. ಸಮರಕ್ಕೆ ಸಿದ್ಧವಾದ ಆನೆಯ ಚಿತ್ರವನ್ನು ನಾರಣಪ್ಪ ಕೊಡುವ ಪರಿ ಇದು: "ಕಡಿಯಣವನಾನೆಗಳ ಮೋರೆಗೆ ತೊಡಿಸಿದರು ದಂತಿಗಳ ಹೆಗಲಲಿ ನಿಡುನೊಗನ ಕಟ್ಟಿದರು. ಕಿವಿಯಲಿ ಕೀಲುಗಳ ಸರಿಸಿ ಜಡಿವ ಗುಳವನು ಹಾಯ್ಕಿ ಬೀಸಿದರೊಡನೆ ಹಕ್ಕರಿಕೆ ಜೋಡಿನಲಡಸಿ ಗಾಲಿಯ ಬಿಗಿದು ಗಜಬಜಿಸಿ" (ಗಭಾದ್ರೋ. ೮–೪೫); "ಬಾರಸಂಕಲೆ ಪಕ್ಕ ಘಂಟೆಯ ಚಾರು ಚಮರದ ಕೊಡತಿಗಳ ಕೈಹಾರೆ ಕೂರಂಕುಶದ ಬಿರುದರು ಹೊದ್ದಿದರು ಗಜವ. ಬಾರದೂಹತ್ತಿಗಳ (ಎರಡೂ ಕೈಗಳಿಂದಲೂ ತಿರುಹುವ ಕತ್ತಿ) ಗುಂಡನು ತೋರಲೌಡಿಯ ತೊಟ್ಟು ಕೈಯಲಿ ವಾರಣದ ದೋಹರವ ನೂಕಿದರು ಉಭಯಸೇನೆಯಲಿ" (ಗಭಾಭೀ, ೪–೨೧).

ಗಜಸೇನಾಪತಿಗಳ ಕೈಚಳಕವನ್ನು ಕುರಿತು ಕವಿ ಕೊಡುವ ಈ ಒಂದು ವರ್ಣನೆ, 'ಗಜಸೇನಾಪತಿಗಳು ನಾರಣಪ್ಪನ ವಂಶೀಕರು' ಎಂಬ ಹೇಳಿಕೆಗೆ ಹತ್ತಿರವಾಗಿ, ಧ್ವನಿಪೂರ್ಣವಾಗಿದೆ. "ತನುಸೊಕ್ಕಿದೈರಾವತವ ಕಿವಿವಿಡಿದೆಳೆವ ದಿಗ್ಗಜತತಿಯನನಮಳಾಂಕುಶದಲಂಜಿಸಿ ಕೆಲಬಲಕೆ ಬಿಡುವ ನುತಗಜಾರೋಹಕರು.... ಮೆರೆದರಮರಾವತಿಯರಾಯನ ಸಭೆಯಲೊಸೆದು" (ಗಭಾಉ. ೯–೪೨).

ಸಮಾರೋಪಕರಣಗಳು : "ಸುಭಟರಿಗಾಯುಧಸಿಂಗಾರವೋ ಮೇಣ ಕಾಲನೇವುರವೋ" (ಗಭಾಕ. ೪-೨).

ಸೈನಿಕರು ಯುದ್ಧಕ್ಕೆ ಹೊರಟಾಗ ಯಾವ ಯಾವ ಆಯುಧಗಳನ್ನ ಹೊಂದಿರುತ್ತಿದ್ದರು, ತಮ್ಮ ದೇಹವನ್ನು ಯಾವ ರೀತಿ ರಕ್ಷಣೆ ಮಾಡಿಕೊಳ್ಳುತ್ತಿದ್ದರು ಮುಂತಾದ ವಿಷಯಗಳ ಬಗೆಗೆ ಗದುಗಿನ ಭಾರತದಲ್ಲಿ ಅನೇಕ ವಿವರಗಳು ದೊರೆಯುತ್ತವೆ. ಅವು ವಾಸ್ತವ ಚಿತ್ರಗಳಾಗಿರಲೂಬಹುದು. ಕವಿ ಕೊಡುವ ಸಮರ ಸನ್ನದ್ಧ ಸೈನಿಕನ ಚಿತ್ರದಲ್ಲಿ ಸಮರೋಪಕರಣಗಳ ಒಂದು ಸುದೀರ್ಘ ಚಿತ್ರವೇ ಇದೆ.

"ಹಲಗೆ ಕಡಿತಲೆ ಹರಿಗೆ ಖಂಡೆಯ ಹೊಳೆವ ಮುಡ್ಡು ಕಠಾರಿ ಡೊಂಕಣಿ ಬಿಲುಸರಳು ತೋಡಿಟ್ಟಮುದ್ಗರ ಪಿಂಡಿವಾಳಚಯ ತಲೆಯನೇಣಿನ (ಹಗ್ಗದಿಂ ಹೆಣೆದ ಶಿರಸ್ತ್ರಾಣ) ಕೈಯ ಚೌರಿಯಲುಳಿಯ ಜೋಡಿನ ಕಟಿಯ ಗಂಟೆಯ ದಳವ ನೀಕ್ಷಿಸು ಪಾರ್ಥ ದುಶ್ಯಾಸನನ ಪಯದಳವ." (ಗಭಾಭಿ. ೩-೨೦).

ಕವಿಕೊಡುವ ಈ ವರ್ಣನೆಯಲ್ಲಿ ಬರುವ ಕೈಸುರಗಿ, ಸೂನಗೆ, ದೂಹತ್ತಿ, ಕಡಿತಲೆ (ಕತ್ತಿ), ಡೊಂಕಣಿ (ಈಟಿ), ಉಬ್ಬಣ—ಮುಂತಾದ ಸಮರೋಪಕರಣಗಳ ಹೆಸರು ಗಮನಾರ್ಹ. ಸಂರಕ್ಷಕ ಸಾಧನಗಳಲ್ಲಿ ಒಂದಾದ ಹರಿಗೆಯಲ್ಲಿ—ನೂರಿ ಹರಿಗೆ, ತಲೆವರಿಗೆ ಎಂಬ ಹೆಸರುಗಳನ್ನು ಕವಿ ಹೇಳುವನು.

ಕವಿ ಕೊಡುವ ಕೆಲವು ವರ್ಣನೆಗಳಲ್ಲಿ ಆ ಸಮರೋಪಕರಣದ ರಚನಾ ವಿನ್ಯಾಸವನ್ನು ಗುರುತಿಸಬಹುದು. ಅಂತಹ ಕೆಲವು ಚಿತ್ರಗಳನ್ನು ನೋಡಿ :

ಸೂನಗೆ : (ಒಂದು ಬಗೆಯ ಕತ್ತಿ) ಕವಿ ಒಂದು ಕಡೆ "ಮುಮ್ಮೊನೆಯ ಸೂನಗೆಯ" (ಗಭಾಭೀ. ೪-೯೧) ಎಂಬ ಪ್ರಯೋಗ ಕೊಡುತ್ತಾನೆ.

ಉಬ್ಬಣ : (ಇದು ಒಂದು ಬಗೆಯ ಚುಚ್ಚುವ ಆಯುಧ) "ಹೆಗಲಹಿಂಯುಬ್ಬಣದ" (ಗಭಾಭೀ. ೩-೧೦) ಎಂಬ ಪ್ರಯೋಗದಿಂದ ಇದೊಂದು ಹೆಗಲಲ್ಲಿ ಧರಿಸುವ ಆಯುಧವಿರಬೇಕೆಂದು ಊಹಿಸಬಹುದು.

ಕಡಿತಲೆ : ಕಿಟ್ಟೆಲ್‌ರವರು ಇದಕ್ಕೆ ಚರ್ಮದ ಗುರಾಣಿ ಎಂದು ಅರ್ಥ ಹೇಳುತ್ತಾರೆ. ಆದರೆ ಕಾವ್ಯಗಳಲ್ಲಿ ದೊರೆಯುವ ಪ್ರಯೋಗಗಳಿಂದ ಇದಕ್ಕೆ 'ಒರೆಯಿಂದ ಎಳೆದ ಕತ್ತಿ' ಎಂದು ಅರ್ಥ ಮಾಡಬಹುದು : "ಉಗಿದಕಡಿತಲೆ ಮುಸುಗಿದವು" (ಗಭಾದ್ರೋ. ೮-೫೫) ; "ಮೆರೆವಕೈದಂಡೆಗಳ ಜುಣುಗಿಸಿ ತುರುಬಿನಿಂದರು ಸಂದಕಡಿ ತಲೆಕಾರರು ಭಯದಲಿ" (ಗಭಾಭೀ. ೪-೩೪, ೫).

ಡೊಂಕಣಿ : ಶೂಲ ಎಂದು ನಿಘಂಟು ಅರ್ಥ ಹೇಳುತ್ತದೆ (ಕಿನಿ. ೬೭೪). ಆದರೆ "ಡೊಂಕಣಿಯ ತಳಪದ ಬೆಳಗುಗಳ" (ಗಭಾಭೀ. ೨-೬), "ಕಡುಗದಗಜರು ಡೊಂಕಣಿಗಳ ಝುಣತ್ಕೃತಿಯ" (ಗಭಾಭೀ. ೪-೪೪), "ಹೆಣನ ಹೋಳಿನ ಸಿಡಿ

ದಡಗು ಡೊಂಕಣಿಯೊಳಿಸೆದವು" (ಗಭಾಭೀ. ೪-೪೪)—ಎಂಬ ಪ್ರಯೋಗಗಳು ಇದೊಂದು ಚುಚ್ಚುವ ಸಮರಾಯುಧವೆಂಬುದನ್ನು ಸಮರ್ಥಿಸುತ್ತವೆ.

ಉಕ್ಕಿನ ಶಿರಸ್ತ್ರಾಣಗಳಿದ್ದಂತೆ ಹಗ್ಗದಿಂದ ಹೆಣೆದ ಶಿರಸ್ತ್ರಾಣಗಳೂ ಇದ್ದ ವೆಂಬುದಕ್ಕೆ ಕವಿಯ 'ತಲೆನೇಣು' (ಗಭಾಭೀ. ೩-೨೦) ಎಂಬ ಪ್ರಯೋಗವೇ ಸಾಕ್ಷಿ. ಕೊರಳಿನಿಂದ ಸೊಂಟದವರೆಗೆ ದೇಹವನ್ನು ಸಂರಕ್ಷಿಸುವುದಕ್ಕಾಗಿ ಇದ್ದ ಗುರಾಣಿ ಅಥವಾ ಹರಿಗೆಗಳಲ್ಲಿ 'ನೂಲಹರಿಗೆ' (ಗಭಾಭೀ. ೪-೪೨, ೫೬), 'ತಲೆ ವರಿಗೆ' (ಗಭಾಭೀ. ೪-೪೨)ಗಳೂ ಇದ್ದವೆಂದು ಕವಿಯ ಪ್ರಯೋಗಗಳಿಂದ ಸಮರ್ಥನೆ ದೊರೆಯುತ್ತದೆ.

ಇಟ್ಟಿ : (ಈಟಿ) ಬೆಟಗೇರಿಯವರು ಹೇಳಿರುವ ಹೇರಿಟ್ಟಿ, ಸಿಲುಕಿಟ್ಟಿಗಳ ಜೊತೆಗೆ 'ತೋಡಿಟ್ಟಿ' (ಗಭಾಭೀ. ೩--೨೦) ಎಂಬ ಮತ್ತೊಂದು ಹೆಸರು ದೊರೆಯು ತ್ತದೆ. ತೋಡಿಟ್ಟಿ ಎಂಬುದಕ್ಕೆ 'ಎರಡೂ ತುದಿಗಳುಳ್ಳ ಒಂದು ವಿಧವಾದ ಈಟಿ' ಎಂದು (ಕಕನಿ. ೪-೩೭೦೩) ವಿವರಣೆ ನೀಡುತ್ತದೆ.

ತಲೆಮುಟಿ : ನಾರಣಪ್ಪನು ಶಿರಸ್ತ್ರಾಣವನ್ನು 'ತಲೆಮುಟಿ' ಎಂಬ ವಿವರ ಣಾತ್ಮಕ ಪದದ ಮೂಲಕ ಸೂಚಿಸುತ್ತಾನೆ : "ಮಡವ ಮೀರುವ ಕಚ್ಚೆಮುಂಡಿಯ ಪಡಿದೊಡೆಯ ತಲೆಮುರೆಯ ಹರಿಗೆಯ ಕಡಿತಲೆಯ ಕಲಿತುಳುವ ಪಡೆ ಹೊಯ್ದಾಡಿ ತಿಳಿ" (ಗಭಾಭೀ. ೪-೩೭).

ತನುತ್ರ : ಶರೀರವನ್ನು ರಕ್ಷಿಸುವ (ಪ್ರಧಾನವಾಗಿ ಎದೆಯನ್ನು) ಈ ರಕ್ಷಾ ಕವಚವನ್ನು 'ತನುತ್ರ' ಎಂಬ ಹೆಸರಿನಿಂದಲೂ ಕರೆದಿದೆ : "ಶರಹತಿಗೆ ಭೀಮನ ಬಲು ಪತಾಕೆ ತನುತ್ರರಥ ಕರ್ಣಾಸ್ತ್ರಮಯವಾಯ್ತು" (ಗಭಾದ್ರೋ. ೧೩-೩೫).

ಹರಿಗೆ : ಪರಿಗೆ (ಸಂ. ಫಲಕ). ಹರಿಗೆಗೆ ಖೇಟಕ, ಖೇಡಯ ಹಲಗೆ ಎಂದು ಅನೇಕ ಹೆಸರುಗಳಿವೆ : ಫಳಕಂ, ಖೇಟಕಂ, ಚರ್ಮ ಹರಿಗೆಯಕ್ಕುಂ—(ಮಂಗರಾ. ೮೭-೩೦). ಸೈನಿಕರು ಯುದ್ಧದಲ್ಲಿ ಇದನ್ನು ಹಿಡಿದಾಗ ಕೊರಳಿನಿಂದ ಸೊಂಟದ ವರೆಗೆ ರಕ್ಷಣೆಯಾಗುತ್ತಿತ್ತು. ಖೇಡಯವನ್ನು ಎಡಗೈಯಲ್ಲಿ ಹಿಡಿದು ಸಂರಕ್ಷಿಸಿ ಕೊಳ್ಳುತ್ತಾ, ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಹೋರಾಡುವುದು ಸಾಮಾನ್ಯ ವಾಗಿ ಸಮರದಲ್ಲಿ ಪದ್ಧತಿ. ಆದರೆ ಯುದ್ಧ ಮಾಡದಿದ್ದಾಗ ಅದು ಸೈನಿಕರ ದೇಹದ ಒಂದು ಭಾಗಕ್ಕೆ ನೇಲುವಂತೆ ಮಾಡುತ್ತಿದ್ದರು. ಕಟಕದಲ್ಲಿ ಹಲಗೆಯ ಬಲಿವ ಭಟರಿದ್ದರೆಂದು ನಾರಣಪ್ಪ ಹೇಳುತ್ತಾನೆ (ಗಭಾಭೀ. ೬-೩೭).

ಹಲಗೆಯಲ್ಲಿ ದಂಡವಲಗೆ, ಹರಿಗೆಯಲ್ಲಿ ತಲೆವರಿಗೆ, ತಳಪಟವರಿಗೆ, ತುಳು ಕುವರಿಗೆ, ತೆಕ್ಕೆವರಿಗೆ—ಎಂಬ ಅನೇಕ ಹೆಸರುಗಳು ಕೇಳಿಬರುತ್ತವೆ : "ಬಿಗಿದ ಬಿಲ್ಲಿನ ದಂಡವಲಗೆಯ....ಗಂಡುಗಲಿಗಳು" (ಗಭಾದ್ರೋ. ೫-೭೦). ಯುದ್ಧದಲ್ಲಿ ತಲೆಯನ್ನು ರಕ್ಷಿಸುವ ಫಲಕಕ್ಕೆ 'ತಲೆವರಿಗೆ' ಎಂದು ಹೆಸರು : "ಮೆಟ್ಟಿ ಹೆಣನನು ಖಚರು ಬಲುಹುರಿಗಟ್ಟಿ ತಲೆವರಿಗೆಯುಲಪಾರ್ಥನ ಕಟ್ಟಳವಿಯಲಿ ಚೂರಿಸಿದರು

ಬ್ಬಣದ ಮೊನೆಗಳಲಿ" (ಗಭಾಶ. ೨೦-೨೪) ; 'ತಲೆವರಿಗೆ' ಎಂಬ ಅರ್ಥದಲ್ಲಿ 'ತಲೆವಲಗೆ' ಎಂಬ ಪದವನ್ನು ಕವಿ ಪ್ರಯೋಗಿಸಿದ್ದಾನೆ : "ಒಲೆದು ಗಜವಿಟ್ಟಣ ದವು ತಲೆವಲಗೆಯಲಿ ಕಲಿಪಾಯದಳ.... ಹೊಕ್ಕೌಂಕಿದವು ಬದ್ಧರದ ಬಂಡಿಗಳು (ಗಭಾದ್ರೋ. ೧೮-೪೪) ; "ನಡೆಗೋಟೆಯೆನೆ ಮಂಡಳಿಸಿ ಬಲಿದರು ತೆಕ್ಕೆವರಿಗೆಗಳ (ಗಭಾಭೀ. ೪-೨೫) ; "ಇಡಿದ ತಳಪಟವರಿಗೆ ಹೊಳಿಸುತ್ತಡಸಿ ಕವಿವಾಬಿಲ್ಲ ಬಿಲ್ಲಿನ ಬಿಡಿಯಳೌಕಿದ ಮುಸುಂಡಿ ಸಲ್ಲೆಹ ಶಕುತಿ ಸಬಳದಲಿ" (ಗಭಾದ್ರೋ ಉಧೃತ, ಕಕನಿ. ೩-೩೩೭೪).

ಸಮರಕ್ಕೆ ಸೈನಿಕರು ಸಿದ್ಧರಾಗಿ ಯಾವ ರೀತಿ ಬಂದರು ಎಂಬ ಚಿತ್ರವನ್ನು ದ್ರೋಣಪರ್ವದಲ್ಲಿ ಕಾಣಬಹುದು :

"ಶಿರದೊಳಾಂತರು ಮೊಚ್ಚೆಯವನಾ ಚರಣದಲಿ ಸೀಸಕವ ತೋಳಲಿ ಬರಿಯ ಕವಚವ ಬೆನ್ನಿನಲಿ ಕಟ್ಟಿದರು ಕೈಹೊಡೆಯ ಸುರಗಿಗಳ ನೀಡಾಡಿ ತಿರುಹಿ ದೋಃ ಗಳನು ಬತ್ತಳಿಕೆಯನು ಬಿಲುದಿರುವಿನಲಿಮೋಹಿದರು" (ಗಭಾದ್ರೋ. ೮-೪೬, ೪೭).

ರಣರಂಗದಲ್ಲಿ ಯೋಧರು ಉಪಯೋಗಿಸುತ್ತಿದ್ದ ಆಯುಧಗಳು ನಾನಾ ಕಾರಣಗಳಿಂದ ನೆಗ್ಗಿ ನುಗ್ಗಿ ನಶಿಸಿ ಕೆಲಸಕ್ಕೆ ಬಾರದೆ ಹೋದ ಸಂದರ್ಭಗಳುಂಟು. ಅಂತಹ ಸಂದರ್ಭಗಳಲ್ಲಿ ಹೊಸ ಹೊಸ ಕೂರಾಯುಧಗಳನ್ನು ಬಂಡಿಗಳಲ್ಲಿ ತುಂಬಿ ತರಿಸಿ ಯೋಧರಿಗೆ ಹಂಚುತ್ತಿದ್ದರು. ಈ ಒಂದೆರಡು ಚಿತ್ರಗಳನ್ನು ನೋಡಿ :

"ಜರಿದ ಜೋಡನು ಹರಿದ ಹಕ್ಕರಿಕೆಗಳ ನುಗ್ಗಾದಗುಳವನು ಬಿರಿದ ಸೀಸಕ ಬಾಹುರಕ್ಕೆಯ ಮುರಿದ ಬಲ್ಲೆಹದ ಅರೆಗಡಿದ ಬಿಲ್ಲುಗಳ ನೆಗ್ಗಿದ ಹರಿಗೆಯ ಮುಕ್ಕಾದ ಕೈದುವತರಿಸಿ ಕಳುಹಿಸುತಿರ್ದನತಿರಭಸದಲಿ" (ಗಭಾದ್ರೋ. ೧೫-೧೮).

"ಬಂಡಿಗಳು ಸಂದಣಿಸಿದವು ಹಕ್ಕರಿಕೆಗಳ ಹಲ್ಲಣದ ಕವಚದ ಸೀಸಕ, ಜೋಡುಗಳ ರೆಂಚೆಗಳ, ಹಿರಿಯುಬ್ಬಣದ ಸಬಳದ ಶೂಲ, ಸುರಗಿಯ, ಕಣೆಯ.... ಕರೆಕರೆದು ರಥಿಕರಿಗೆ ಮಾವಂತರಿಗೆ, ಕಾಲಾಳಿಗೆ ರಾವುತರಿಗೆ ಕೊಡಿಸಿದನವರವರಿಗ ವರಂ ಗದಾಯುಧವ" (ಗಭಾದ್ರೋ. ೧೫-೧೯, ೨೦).

ಉಡಿಗೆ-ತೊಡಿಗೆಗಳು : ಸೈನಿಕರ ಉಡಿಗೆತೊಡಿಗೆಗಳನ್ನು ಕುರಿತು ನಾರಣಪ್ಪ ಕೊಡುವ ಈ ಚಿತ್ರವೂ ಗಮನಾರ್ಹ : "ನೆಲಕೆನಿಗುರುವ ಗಂಗೆವಾಳದ ಬಿಳಿಯ ಚೌರಿಗಳುಲಿವಗಂಟೆಯತೊಳಪಬದ್ದುಗೆದಾರ ಕಾಂಚನಮಯುಗೊಂಡೆಯದ ಉಲಿವ ಗೆಜ್ಜೆಯ ಚೆಲ್ಲಣದ ಹೊಂಬಳಿದ ಹರಿಗೆಯ ಹೊಳೆವ ಕಡಿತಲೆಗಳ ವಿಲಾಸದೊಳಂದು ಹೊಕ್ಕುದು ತುಳುವ ಪಡೆ ಕಡುಗಿ" (ಗಭಾಭೀ. ೪-೩೩.; ಗಭಾವಿ. ೫-೪೪). ರಾಜರು ಧರಿಸುತ್ತಿದ್ದ ಉಡಿಗೆತೊಡಿಗೆಗಳು, ಹೊಂದಿರುತ್ತಿದ್ದ ಸಮರಾಯುಧಗಳು ಅವರ ಘನತೆ ಗೌರವಗಳ ಸಂಕೇತಗಳಂತಿರುತ್ತಿದ್ದವು. ಉದಾಹರಣೆಗೆ, ಉತ್ತರ ಕುಮಾರ ಪಾರ್ಥನ ಜೊತೆಯಲ್ಲಿ ಯುದ್ಧಕ್ಕೆ ಹೊರಟ ಈ ಸಂದರ್ಭವನ್ನು ನೋಡಿ: "....ಹೊಂಗೆಲಸಮಯ ಕವಚವನು ಪಾರ್ಥಂಗೆ ಕೊಟ್ಟನು ಜೋಡು ಸೀಸಕ

ದಂಗಿಗಳನಳವಡಿಸಿ ರಾಜಕುಮಾರನನುವಾದ" (ಗಭಾವಿ. ೫-೪೪). ಇದು ಕರ್ಣ ಯುದ್ಧಕ್ಕೆ ಹೊರಟ ವೈಖರಿ: "ವರಸಿಭಾರಿಯ ಬಳವಿನಲಿ ಬಲಮುರಿಯ ಬಿಗಿದನು ಪದಮುಖಕೆ ಮುಂಜೆರಗ ಬಿಟ್ಟನು ಬಿಗಿದ ಬದ್ದುಗೆದಾರ ಗೊಂಡೆಯವ ಕಿರಣಲಹರಿಯ ವಜ್ರಮಾಣಿಕ ಪರಿರಚಿತ ಭುಜಕಂತಕರ್ಣಾಭರಣ ಚರಣದ ಖಡೆಯ ದಲಿ ರಂಜಿಸಿದನಾಕರ್ಣ" (ಗಭಾಕ. ೮-೧೭).

ಬೀಳ್ಕೊಡಿಗೆ: ರಾಜರು ದಿಗ್ವಿಜಯವನ್ನು ಕೈಗೊಳ್ಳುವ ಮುನ್ನ ಶುಭಲಗ್ನ ವನ್ನು ನೋಡಿಸಿ, ಗುರುಹಿರಿಯರನ್ನೂ ದೇವಬ್ರಾಹ್ಮಣರನ್ನೂ ಕಂಡು ಅವರ ಹರಕೆ ಆಶೀರ್ವಾದಗಳನ್ನು ಪಡೆಯುತ್ತಿದ್ದರು. ಉದಾಹರಣೆಗೆ, ಪಾರ್ಥನನ್ನು ಸಮರಕ್ಕೆ ಬೀಳ್ಕೊಟ್ಟ ಚಿತ್ರವನ್ನು ನಾರಣಪ್ಪ ಸುಂದರವಾಗಿ ಚಿತ್ರಿಸಿದ್ದಾನೆ: "ವೀರಸೇಸೆಯನಿಕ್ಕಿರಾಯನನಾರಿ ಪರಸಿದಳು. ನೆರದಖಿಳ ವಿಪ್ರರು ಚಾತುರ್ವೇದ ಮಂಗಳಸೂಕ್ತ ಘೋಷಣೆ ಮಾಡುತ್ತಿರುವಾಗ ಕಾಂತೆಯರು ರತ್ನದಾರತಿಯನ್ನೆತ್ತಿ ದರು. ಮುಂದೆ ಪಾರ್ಥನಿಳಯವನ್ನು ಹೊರವಂಟು ಬೀದಿಗಳೊಳಗೆ ಬರಲು ತಳಿಗೆದಂಬುಲ, ವೀರಸೇಸೆಯ ಮಂಗಳಾರತಿಯ ಫಲ ಸಮೋಹದ ಕಾಣಿಕೆಯನ್ನು ಕೋಮಲೆಯರಿಂದ ಸ್ವೀಕರಿಸಿದ. ಮನೆಮನೆಗಳಲಿ ಉಪ್ಪಾರತಿಗಳಿಂದ ಮನ್ನಿಸಿ ಕೊಳುತ ಪಾಳಯದಿಂದ ಹೊರವಂಟ" (ಗಭಾಕ. ೧೮-೧೩, ೧೪).

ಬಲಿ: ಸಮರಕ್ಕೆ ತೆರಳುವ ಮುನ್ನ ಆಚರಿಸುವ ವಿಧಿಗಳಲ್ಲಿ ಬಲಿಯೂ ಒಂದು. ಸಮರದಲ್ಲಿ ಗಣನೀಯ ಪಾತ್ರ ವಹಿಸುವ "ಕೈದುಗಳಿಗೆ ಬಲಿಯನ್ನಿತ್ತು ಪೂಜಿಸಿದ ಸಂದರ್ಭಗಳು ಸಮರ ವರ್ಣನೆಗಳಲ್ಲಿ ವಿಪುಲವಾಗಿ ದೊರೆಯುತ್ತವೆ. ಇದು ಕರ್ಣನು ಆಯುಧ ಶಾಲೆಯಲ್ಲಿ ಶಸ್ತ್ರಾಸ್ತ್ರಗಳನ್ನು ಪೂಜಿಸಿದ ರೀತಿ: "ಕುರಿಯ ಹಣಿದದ ಕೋಳಿ ಕೋಣನ ಮುರಿದಲೆಯ ಮೀಸಲಿನ ರಕುತದ ದುರುದುರಿಪ ದಂಡೆಯಲಿ ಕಲಿಸಿದ ಕೂಳಮುದ್ದೆಗಳ ಹೊರಗೆ ಬಡಿಸಿದ ಭೂತಬಲಿಬೊಬ್ಬಿರಿತ ದೊಡನುಬ್ಬೇಳ್ವಲಗ್ಗೆಯ ಹರೆಗಳಬ್ಬರವಾಯ್ತು ಕರ್ಣನ ಶಸ್ತ್ರಪೂಜೆಯಲಿ".... "ಕುರುನೃಪಾಲನ ಪಾಳಯದೊಳಾಯಿರುಳುಮನೆಮನೆಗಳಲಿ ಶಸ್ತ್ರೋತ್ಕರ ಸಮಾ ರಾಧನೆಯೊಳಿರ್ದುದು ಕೂಡೆ ನೃಪಕಟಕ" (ಗಭಾಕ. ೮-೮, ೯).

ದಾನ: ಸಮರಕ್ಕೆ ಮುನ್ನ ಅರಸರು ಆಚರಿಸುತ್ತಿದ್ದ ಸಂಪ್ರದಾಯಗಳಲ್ಲಿ ದೇವಗುರುವಿಪ್ರರಿಗೆ ನೀಡುತ್ತಿದ್ದ ದಾನವೂ ಒಂದು. ಕರ್ಣನು ಯುದ್ಧಕ್ಕೆ ಹೊರ ಟಾಗ ದೇವಗುರುವಿಪ್ರರಿಗೆ ಸಂಭಾವನೆ ಮಾಡಿದುದೊಂದೇ ಅಲ್ಲದೆ ಅನುಪಮಿತ ಧನರತುನ ಭಂಡಾರವನು ತೆಗೆತೆಗೆಸಿ ಮನದಣಿಯೆ ಯಾಚಕರಿಗೆ ಇತ್ತನು (ಗಭಾಕ. ೮-೧೬, ೧೮, ೨೦).

ರಣವೀಳ್ಯ: ರಾಜರು ಸೈನಿಕರಿಗೂ ದಂಡನಾಯಕರಿಗೂ ವೀಳಯವನ್ನು ಕೊಡುವದರ ಮೂಲಕ ಸಮರಕ್ಕೆ ಬೀಳ್ಕೊಡುವ ಒಂದು ಸಭ್ಯ ಸಂಪ್ರದಾಯ ದಕ್ಷಿಣ ಭಾರತದಲ್ಲಿ ಬಹಳ ಹಿಂದಿನಿಂದಲೂ ರೂಢಿಯಲ್ಲಿದೆ. ಅದಕ್ಕೆ ಶಾಸನಾಧಾರ

ಗಳೂ ಇವೆ. ಸೇನಾನಿಗಳಿಗೆ ಈ ರೀತಿ ವೀಳಯವನ್ನು ಕೊಟ್ಟು ಅವರ ಮೇ ಜವಾಬ್ದಾರಿಯನ್ನು ಹೊರಿಸಿ ಬೀಳ್ಕೊಡುವ ಸಂದರ್ಭಗಳು ಸಮರ ಪ್ರಕರಣಗಳ ಅಲ್ಲಲ್ಲಿ ದೊರೆಯುತ್ತವೆ. ಕರ್ಣನು ಸಮರಕ್ಕೆ ತೆರಳುವ ಮುನ್ನ ಅಖಿಳ ನಾಯಕರ ಕರೆದು ಕರ್ಪುರದ ವೀಳಯವಿತ್ತನೆಂದು ನಾರಣಪ್ಪ ಹೇಳುತ್ತಾ (ಗಭಾಕ. ೮–೨೦, ೧೮–೯; ಗಭಾದ್ರೋ. ೮–೫೭).

ದಂಡಯಾತ್ರೆ: ದಂಡಯಾತ್ರೆಯಲ್ಲಿ ಸೈನ್ಯದ ಜೊತೆಯಲ್ಲಿ ಬರುತ್ತಿದ್ದ ನಾನಾ ವೃತ್ತಿಕುಶಲರಲ್ಲಿ ಸಾಣಿಗರು ಒಬ್ಬರು. ಇವರ ಕಾರ್ಯವ್ಯಾಪ್ತಿಯನ್ನು ಕುರಿ ಈ ವರ್ಣನೆಯನ್ನು ನೋಡಿ: "ಅಸಿಯಮಸೆಸುವ ಮುರಿದ ಲೌಡಿಯ ಬೆಸಸು ಕುಂತ ಧಾರೆಗಳ ಥಾಳಿಸುವ ಸೊಪ್ಪಾದ ಹಿಳುಕಿನಗರಿಯ ಕೀಲಿಸುವ ಹೊಸತಿರು ಕಟ್ಟುವ ಕಠಾರಿಯ ಮಸೆವ ಹರಿಗೆಯ ಬಲಿವ ಸುರಗಿಯ ಒಸೆಯ ಬೆಳಸುವ ವೀ ಭಟರೊಪ್ಪಿದರು ಕಟಕದಲಿ" (ಗಭಾಭೀ. ೫–೩೮).

ಸಮರ ಸಾಮಗ್ರಿಗಳಲ್ಲಿ ಬಹಳವನ್ನು ಬಂಡಿಗಳಲ್ಲೇ ಸಾಗಿಸುತ್ತಿದ್ದ ವಿವ ಣಾತ್ಮಕ ಚಿತ್ರಗಳನ್ನು ನಾರಣಪ್ಪ ಕೊಡುತ್ತಾನೆ: "ಪರಶು ಮುಸಲ ಮುಸುಂಡಿ ಸಲ್ಲೆಹ ಪರಿಘ ತೋಮರ ಚಕ್ರವಸಿಮುದ್ಗರ ತ್ರಿಶೂಲ ಕಠಾರಿ ಖೇಟಕ ಪಿಂಡಿವಾಳ ಚಯ ಸುರಗಿ ಮೊದಲಾದಖಿಳ ಶಸ್ತ್ರೋತ್ಕರವನೊಂದೇ ಬಂಡಿಯಲಿ ಸಂವರಿಸಿದೆನು" (ಗಭಾಕ. ೧೮–೨೩; ಗಭಾಶ. ೨–೪೪).

ಹೋರಾಟದ ಸ್ವರೂಪ: ಸಮರದಲ್ಲಿ ನಾನಾ ಪಡೆಯವರ ಹೋರಾಟದ ತೀವ್ರ ಸ್ವರೂಪವನ್ನು ಕುರಿತು ಹಲವಾರು ಚಿತ್ರಗಳು ದೊರೆಯುತ್ತವೆ. ಬಿಲ್ಲವರ ಹೋರಾಟ ಎಷ್ಟು ಭಯಂಕರವಾಗಿತ್ತು ಎಂಬುದಕ್ಕೆ ನಾರಣಪ್ಪ ಕೊಡುವ ಈ ಒಂದು ಚಿತ್ರವೇ ಸಾಕು: "ಜೋಡನೊಡೆಹಾಯ್ದುಂಬುಧರಣಿಯೊಳಾಡಿದವು. ಗುಳಸರಿದ ಕರಿಗಳ ತೋಡಿನೆಟ್ಟವು. ಬದ್ಧರಂಗಳ ಹಾದಣವ ಕೊರೆದು ಈಡಿರಿದವ ರಿಸುಭಟರೊಡಲಿನ ಜೋಡುಗಳ ಜರಿಯೊಡೆದು ತಳಪಟ ಮಾಡಿದವು ಚತುರಂಗ ಬಲವನು ಪಾರ್ಥನಂಬುಗಳು" (ಗಭಾಭೀ. ೮–೪೭).

ಹಾಗೆಯೆ, ಕರ್ಣನ ಕಣೆಯ ಪ್ರಭಾವನ್ನು ವರ್ಣಿಸುತ್ತಾ ಕವಿ "ರಾಯನ ಹುದಿದ ಕವಚವ ಭೇದಿಸಿದವೊಳಬಿದ್ದವಂಬುಗಳು. ಎದೆಯತಾಕಿದ ಬಾಣ ಬೆನ್ನಲಿ ತುದಿಮೊನೆಯ ತೋರಿದವು" (ಗಭಾಕ. ೧೧–೫೪) ಎಂದು ಹೇಳುತ್ತಾನೆ. ಇದು ಸೆಣಸಾಟದ ಇನ್ನೊಂದು ಚಿತ್ರ: "ಬೆರಸಿಹೊಯ್ದರು ತಿವಿದಿರೆಚ್ಚರು ಹರೆಗಡಿದರರೆಗಡಿದರೆತ್ತಿದರರೆದರಟ್ಟೊರಸಿದರು ತರಿದರು ತುಳುಕಿ ತೂರಿದರು ಸರಳು ಸರಿಯಲು ಜೋಡು ಜರಿಯಲು ತುರಗದೂಪಿಸೆ ಸಾರಥಿಯು ಕೈಹರಿಯೆ ಕಾದಿತು ವೀರನಾಯಕವಾಡಿ ಧೈರ್ಯದಲಿ" (ಗಭಾಭೀ. ೮–೨೭).

ಸಮರದ ನಂತರ: ಸಮರದ ನಂತರ ರಣರಂಗ ಭಯಾನಕ, ಅತಿ ಘೋರ, ಕಣೆವೊಡೆದಕಾಲವರು, ಕಯ್ಪೋದ ತೋಳವರು, ಪಣೆವೊಡೆದ ಮೊಗದವರ ಚಿತ್ರ

ಕರುಣಾಜನಕವಾಗಿದ್ದರೆ, ಉಡಿದ ತೊಡೆ, ಸಿಡಿದ ಕಣ್ಣು ಕೆಡೆದ ಮುಂಡ, ಕೆದರಿದ ತೊಡಿಗೆ, ತುಂಡಿರಿಸಿದ ತೋಳುಗಳು ಛಿದ್ರಭಿದ್ರವಾದ ದೇಹಗಳು— ಪೊರಳ್ವವಾಜಿ, ನರಳ್ವರಾವುತರು, ಉರುಳ್ವ ಕರಿಗಳು—ಇವುಗಳಿಂದ ಕೂಡಿದ ದೃಶ್ಯ ಭಯಂಕರವೂ ಚಿಂತಾಜನಕವೂ ಆಗಿದೆ. ಇಂತಹ ರಣರಂಗ ಹಕ್ಕಿಪಕ್ಷಿಗಳಿಗಾನಂದ. ಅವು ಯಾವ ರೀತಿ ರಣರಂಗದಲ್ಲಿ ಬಿದ್ದಿದ್ದ ಹೆಣಗಳನ್ನು ಸೂರೆ ಮಾಡುತ್ತಿದ್ದವು ಎಂಬುದನ್ನು ನಾರಣಪ್ಪನ ಈ ದೇಸಿಯ ಸೊಬಗಿನಲ್ಲಿ ಕಾಣಬಹುದು: "ಸಿಡಿದ ಕಣ್ಣಾಲಿಗಳನಾಯ್ದು ಕುಡುಕುಗೊಂಡವು ಕಾಗೆಗಳು. ಹಿಮ್ಮಡಿಯ ಹೊರಳಿಯ ನರವ ಸೆಳೆದವು ಜಂಬುಕಾದಿಗಳು, ಅಡಗಕೆದಕಿರಿದೊರಲಿ ಕರೆದವುಗಡಣವನು ಗೂಗೆಗಳು, ರಕುತದ ಕಡಲೊಳೋಕುಳಿಯಾಡಿದವು ಭೇತಾಳಕಾಳಿಯರು" (ಗಭಾಭೀ. ೫-೩೩).

ಸಮರ ನೀತಿ: ಸಮರವೆಂದರೆ ಕೊಲೆ, ಸುಲಿಗೆ, ದರೋಡೆ, ದ್ವೇಷ, ಪ್ರತೀಕಾರ ಎಂದು ಅಷ್ಟು ಮಾತ್ರವೇ ಅರ್ಥವಲ್ಲ. ಯುದ್ಧವೆಂದಮೇಲೆ ಇವೆಲ್ಲವೂ ಅನಿವಾರ್ಯವಾದರೂ ಸಮರದಲ್ಲಿ ಉಭಯ ಪಕ್ಷಗಳಲ್ಲೂ ಕೆಲವು ಶಿಷ್ಟಾಚಾರಗಳಿರಬೇಕು. ನೀತಿನಿಯಮಗಳನ್ನು ಪಾಲಿಸಬೇಕು. ಶರಣಾಗತ ರಕ್ಷಣೆಯನ್ನು ಮಹಾಭಾರತ ಒತ್ತಿ ಹೇಳುತ್ತದೆ. ಹಾಗೆ ಮಾಡದಿದ್ದವನಿಗೆ ದುರ್ಗತಿ ಕಾದಿದೆ. ರಣದಲ್ಲಿ ಓಡಿಹೋದವನಿಗೆ ಶರಣಾಗತರ ಕಾಯದೆ ಬಿಡುವವನಿಗೆ ಆದ ಗತಿಯಾಗುತ್ತದೆ (ಗಭಾದ್ರೋ. ೨-೮). ಹಗೆಯ ವಿಷಯದಲ್ಲೂ ಅಷ್ಟೇ ಎಚ್ಚರಿಕೆಯಿಂದ ಇರಬೇಕು. ಹಗೆಯ ಹೆಂಗಳನ್ನು ಅರಮನೆಯಲ್ಲಿ ಸೇರಿಸುವದು ಹೇಳಿಗೆಯ ಹಾವಿನಂತೆ ಅಪಾಯ (ಗಭಾಆ. ೮-೩೫). ಹೋದ ಶತ್ರುವನ್ನು ಕಂಡು ರಣದಲ್ಲಿ ಖೇದಗೊಂಡು ಇದಿರಾಡಿ ಪುನರಪಿ ಕಾದಿದರೆ ನೊಂದ ಹುಲಿಯನ್ನು ಕೆಣಕಿದಂತೆ ಅಪಾಯ. ಆದ್ದರಿಂದ ಆಪತ್ತೆಸಗಿದಾಗಲೇ ಹಗೆಯ ಗೆಲುವುದು ವಸುಮತೀಶರ ನೀತಿ (ಗಭಾಕ. ೨೭-೧೯) ಹೀಗೆ ಸಮರ ಸಂಹಿತೆಯನ್ನು ಕುರಿತು ಪ್ರಾಸಂಗಿಕವಾಗಿ ಕವಿ ಹೇಳುವ ಕೆಲವು ಮಾತುಗಳನ್ನು ಅಲ್ಲಲ್ಲಿ ಗಮನಿಸಬಹುದು.

ಸಮರದಲ್ಲಿ ಚಿಕಿತ್ಸೆ: ಗದುಗಿನ ಭಾರತದ ಭೀಷ್ಮಪರ್ವದ ಐದನೆಯ ಸಂಧಿ ರಣರಂಗದ ಒಂದು ಜೀವಂತ ಚಿತ್ರವನ್ನು ನಮ್ಮ ಮುಂದಿಡುತ್ತದೆ. ಎರಡೂ ಕಡೆಯವರಿಗೂ ಭಯಂಕರ ಯುದ್ಧ ನಡೆದ ನಂತರ ಉಭಯ ಪಾಳಯಗಳಲ್ಲೂ ಯಾವ ರೀತಿ ಸೈನಿಕರು ನೊಂದವರ ಯೋಗಕ್ಷೇಮದಲ್ಲಿ ತೊಡಗಿದ್ದರು ಎಂಬುದನ್ನು ಕವಿ ಹೇಳುತ್ತಾನೆ. ಸೈನಿಕರು ತಮ್ಮ ಕಡೆಯವರಿಗಾದ ಕಷ್ಟನಷ್ಟಗಳನ್ನು ವಿಚಾರಿಸಿ ಮುರಿದ ಆಯುಧಗಳನ್ನು ಸರಿಪಡಿಸುತ್ತ, ಗಾಯಗೊಂಡು ನರಳುತ್ತ ಬಿದ್ದಿದ್ದ ಕರಿತುರಗ ಕಾಲಾಳುಗಳ ಕ್ಷೇಮ ಚಿಂತನೆಯಲ್ಲಿ ಚಿಕಿತ್ಸೆಯಲ್ಲಿ ನಿರತರಾಗಿದ್ದರು. ನಾರಣಪ್ಪ ಕೊಡುವ ಈ ನಾಲ್ಕು ಭಾಮಿನಿಗಳಲ್ಲಿ ವೈದ್ಯತಂಡ ಗಾಯಗೊಂಡವರಿಗೆ ನೀಡಿದ ಚಿಕಿತ್ಸೆಯ ಸಂಕ್ಷಿಪ್ತ ವರ್ಣನೆಯಿದೆ:

ಪಾಳಯದಲ್ಲಿ ಒಂದು ಸಂಜೆ ಯೋಧರ ಕಾರ್ಯ ಚಟುವಟಿಕೆ ಹೀಗೆ ಸಾಗಿತ್ತು "ಅಸಿಯಮಸೆಸುವ ಮುರಿದ ಲೌಡಿಯಬೆಸುವ ಕುಂತದ ಧಾರೆಗಳ ಥಾಳಿಸು ನೆರೆಸೊಪ್ಪಾದ ಹಿಳುಕಿನ ಗರಿಯ ಕೀಲಿಸುವ, ಹೊಸ ತಿರುವ ಕಟ್ಟುವ, ಕಠಾರಿ ಮಸೆವ, ಹಲಗೆಯ ಬಲಿವ ಸುರಗಿಯ ಒಸೆಯ ಬೆಳಸುವ ವೀರಭಟರೊಪ್ಪಿದ ಕಟಕದಲಿ" (ಗಭಾಭೀ. ೫–೩೮).

ಇನ್ನೊಂದು ಕಡೆ ತುರಗವೈದ್ಯರು—"ಹರಿದ ಕೊರಳನು ಬಿಗಿವ, ಉರದೊಳ್ ಮುರಿದ ಬಾಣವ ಕೀಳ್ವ ಹೊಟ್ಟೆಯ ನಿರಿಗುರುಳನೊಳಗಿಕ್ಕಿ ಹೊಲಿಸುವ ಮದ್ದು ಗಳನಿಡಿವ ಉರಿವ ಸೇಕದನಸ್ಯದೊಳು ಹದಗರಿವ ತುರಗದ ವೈದ್ಯತತಿಯೆಚ್ಚರಿ ಯಲಿ ಸಂತೈಸಿದರು ವಾಜಿಗಳ ವೇದನೆಯ" (ಗಭಾಭೀ. ೫–೩೯).

"ಒಡಲಿನೊಳು ಮುರಿದಿದ್ದ ಸಬಳವ ನುಡಿಯಲೀಯದೆ ಕೀಳ್ವ, ಮದ್ದನು ಡಿವ, ಜೀವಣಿಗೆಯೊಳು ಸಪ್ರಾಣಿಸುವ, ದುರ್ವ್ರಣವ ತೊಳೆದು ಕಟ್ಟುವ ಹಸ್ತಿ ವೈದ್ಯರ ಗಡಣವುಭಯದೊಳೆಸೆವಂತ್ಯದ ಕಡಲ ರಭಸಕೆ ತೊಡಕನಿಕ್ಕಿತು ಬಹ ಬಲ ಜಲಧಿ" (ಗಭಾಭೀ. ೫–೪೦).

ಮೇಲಿನ ಎರಡು ಪದ್ಯಗಳು ತುರಗ ಹಾಗೂ ಹಸ್ತಿವೈದ್ಯರ ಚಿಕಿತ್ಸಾಕ್ರಮ ವನ್ನು ನಿರೂಪಿಸಿದರೆ, ಮುಂದಿನ ಎರಡು ಪದ್ಯಗಳು ಸೈನಿಕರಿಗೆ ನೀಡಿದ ಚಿಕಿತ್ಸೆಯ ವಿವರವನ್ನು ತಿಳಿಸುತ್ತವೆ:

ಛಿದ್ರವಾಗಿ ರಂಧ್ರಗೊಂಡ ಗಾಯದ ಬಾಯಿಗೆ ಗಿಡಮೂಲಿಕೆಗಳ ಔಷಧ ವನ್ನು ಆಳತೆಗೆ ತಕ್ಕಂತೆ ತುಂಬಿ ತೈಲವನ್ನು ಲೇಪಿಸಿದರು. ಮೈಯಲ್ಲಿ ಆದ ಗಾಯ ಗಳ ರಕ್ತವನ್ನು ತೊಳೆದು ಹಳದುಪ್ಪವನ್ನು ತೊಡೆದರು. ಚುಚ್ಚುಗಾಯಗಳಿಗೆ ಹಂದಿಯ ತುಪ್ಪವನ್ನು ತೊಡೆದು ತೈಲಧಾರೆ ಬಿಟ್ಟರು. ಕರುಳನ್ನು ಒಳಗಡಿಸಿ ಮುಚ್ಚಿ ಮಂತ್ರಿಸಿ ಮಂತ್ರೋದಕವನ್ನು ಕುಡಿಸಿ ಔಷಧಗಳನ್ನು ತೊಡೆದರು.

"ಬಾದಣಿಸಿದೇರುಗಳ ಬಾಯೊಳು, ಕಾದ ಬಾರಂಗಿಗಳ ನಳತೆಗೆ ಕೋದು, ವಾಮದೊಳೆಯ್ದೆ ಹಿಡಿದರು ತೈಲಧಾರೆಗಳ. ಆದ ಮೈಗಂಡಿಯೊಳು ರಕುತವ ಶೋಧಿಸುತ, ಹಳದುಪ್ಪವನು ತೊಡೆದಾದರಿಸಿದುದು ವೈದ್ಯಸಂತತಿ ವೀರಭಟರುಗಳ" (ಗಭಾಭೀ. ೫–೪೧).

"ಖಡುಗದಡವೊಯ್ಲುಗಳಲಡುಮದ್ದಡಸಿದರು. ಸೂಕರನ ತುಪ್ಪವ ತೊಡದ ರಿಂದೇರಿನೊಳುಬಿಟ್ಟರು ತೈಲಧಾರೆಗಳ ಕುಡಿಸಿದರು. ಮಂತ್ರೋದಕವನೊಳಗಡಸಿ ಕರುಳನು ಮುಚ್ಚಿ ಮಂತ್ರಿಸಿ ತೊಡೆದಖಿಳೌಷಧಿಗಳನು ನೃಪಸೇನೆಯೆರಡರಲಿ" (ಗಭಾಭೀ. ೫–೪೨).

ಸೈನಿಕರನ್ನು ಉದ್ದೇಶಿಸಿ ಭಾಷಣ: "ಧರಣಿನುಂಗುವಳಿಬ್ಬರನು ಸಂಗರವ ಜಯಿಸದನೃಪನ| ದೇಶಾಂತರವ ಚರಿಸದ ಪಂಡಿತನನಿದು ಶಾಸ್ತ್ರಸಿದ್ಧವಲೆ" (ಗಭಾಉ. ೪–೨೨).

ಸಮರಕ್ಕೆ ಮುಂಚೆ ಅಥವಾ ಸಮರ ಮಧ್ಯದಲ್ಲಿ ಸೈನಿಕರನ್ನು ಉದ್ದೇಶಿಸಿ ರಾಜಪುರೋಹಿತರು ಬೋಧನೆ ಮಾಡಿ ಅವರಲ್ಲಿ ಹುರುಪು ಹುಟ್ಟಿಸಬೇಕು ಎಂದು ಕೌಟಿಲ್ಯನ ಅರ್ಥಶಾಸ್ತ್ರವು ಹೇಳುತ್ತದೆ.

ಫೆರಿಸ್ಟ ಎಂಬ ವಿದೇಶೀ ಪ್ರವಾಸಿ ೧೩೩೭ರ ಒಂದು ಮುತ್ತಿಗೆಯನ್ನು ವಿವರಿಸುತ್ತ ರಾಜನ ಜೊತೆಯಲ್ಲಿ ಬ್ರಾಹ್ಮಣರೂ ಇದ್ದು ಅವರು ಪ್ರತಿದಿನವೂ ವೈರಿವಧೆ ಮಾಡುವುದರಲ್ಲಿರುವ ಹಿರಿಮೆಯನ್ನು ಕುರಿತು ಭಾಷಣ ಮಾಡಿ ಸೈನಿಕರಲ್ಲಿ ರೋಷವನ್ನುಂಟುಮಾಡುತ್ತಿದ್ದರೆಂದು ಹೇಳುವನು.[7]

ಗದುಗಿನ ಭಾರತದಲ್ಲಿ ರಾಜಪುರೋಹಿತರ ವಿಚಾರ ಬರದಿದ್ದರೂ ಸೇನಾನಿಗಳು ಹಾಗೂ ಸೈನಿಕರನ್ನು ಉದ್ದೇಶಿಸಿ ರಾಜರು ವೀರಭಾಷಣ ಮಾಡಿದ ಸಂದರ್ಭ ದೊರೆಯುತ್ತದೆ.

ಕರ್ಣನು ಸಮರಕ್ಕೆ ಹೊರಟಾಗ ಅಪಶಕುನಗಳಾಗಿ ಸೈನಿಕರೆಲ್ಲ ಹೆದರಿ ಓಡಿ ಹೋಗುವಾಗ ಆ ಹೇಡಿ ಸೈನಿಕರನ್ನು ಉದ್ದೇಶಿಸಿ ಕರ್ಣ ಮಾಡುವ ಭಾಷಣ ಧ್ವನಿಪೂರ್ಣವಾಗಿದೆ :

"ರಣಮನೋರಾಗದಲಿ ದಳಸಂದಣಿಯ ನಿಲಿಸಿದನತಿರಥರ ಲಾವಣಿಗೆಗೊಂಡನು ಕರ್ಣಪರಿವಾರಕ್ಕೆ ಕೈಮುಗಿದು" (ಗಭಾಕ. ೮-೨೮).

"ನೊಂದವರುನಿಲಿ ಸ್ವಾಮಿಕಾರ್ಯಕೆ ಹಿಂದುಗಳೆವರು ಮರಳಿ ಮನೆಗಳ ಹಿಂದಣಾಸೆಯ ಹೇವ ಹರುಕರಿಗಿಂದು ಮಹನವಮಿ. ಓಡಿ ನಾಚಿಸುವರುನಿಲಿ ರಣಖೇಡರೀಗಳೆ ಮರಳಿ ಮನವಲ್ಲಾಡಿ ಮರುಗುವವರೇಳಿ ಮರಣದಲಾವಫಲಸಿದ್ಧಿ ಕೊಡುಗಲುಕರು ನಿಲ್ಲಿ. ಇಹಪರಗೇಡಿಗರು ಹೆರಸಾರಿ ಗುಣದಲಿ ಬೇಡಿಕೊಂಬೆನು ಖಾತಿಗೊಳ್ಳೆನು. ಹೋಗಿ ನೀವು" (ಗಭಾಕ. ೮-೨೯, ೩೦).

"ಸಂದ ಸುಭಟರು ಬನ್ನಿ ಸ್ವರ್ಗದ ಬಂದಿಕಾರರು ಬನ್ನಿ ಮನದಿಂಮುಂದೆ ಹೆಜ್ಜೆಯ ತವಕಿಗರು ಬಹುದೆನ್ನ ಸಂಗಾತ ನೊಂದಡುಬ್ಬುವರಿತ್ತ ಬನ್ನಿ ಪುರಂದರನ ಸರಿಗದ್ದುಗೆಗೆ ಮನಸಂದವರು ಹೊಗಿ ರಣವೆಂದನು ಕರ್ಣನಿಜಬಲಕೆ" (ಗಭಾಕ. ೮-೩೧).

"ವೀರಭಟರಾಹವಹೊಗಿ ಜರ್ಝರರಿತ್ತಲು ನಡೆಯಿ ಕದನ ವಿಚಾರಶೀಲರು ಮುಂದೆ ಹೋಗಿ ಮಹಾರಥಾದಿಗಳು ಆರುಬಲ್ಲರು ಸಮರಯಜ್ಞದ ಸಾರವನು ಪಾಪಿಗಳಿರಕಟ ಶರೀರವನು ಕೂಡಿ ಪಡೆಯಿ ಮುಕ್ತಿಯನೆಂದನಾಕರ್ಣ" (ಗಭಾಕ. ೮-೩೨).

ಸಮರಕ್ಕೆ ಮುಂಚೆ ಸೈನಿಕರನ್ನು ಉದ್ದೇಶಿಸಿ ರಾಜರು ಪ್ರೋತ್ಸಾಹದ ನುಡಿಗಳನ್ನಾಡುವ ಒಂದು ಸಂಪ್ರದಾಯ ಇತ್ತೋ ಇಲ್ಲವೋ ಅದು ಇಲ್ಲಿ ಅಪ್ರಕೃತ.

---

7 Ferista : History of the Rise of the Mahomedan Power in India (Tr. John Briggs), Vol. II, p. 314.

ಆದರೆ ಯುದ್ಧದಲ್ಲಿ ಸೈನಿಕರು ದಿಟ್ಟತನದಿಂದ ಹೋರಾಡಲು ಅಂಜಿ ಹೇಡಿಗಳಂತೆ ಪಲಾಯನ ವಾದವನ್ನು ಕೈಗೊಂಡಾಗ ಅವರನ್ನು ಉದ್ದೇಶಿಸಿ, ಕೆಲವು ಸಂದರ್ಭಗಳಲ್ಲಿ ತೇಜೋವಧೆ ಮಾಡಿ ರಣೋತ್ಸಾಹವನ್ನುಂಟುಮಾಡುವಂತಹ ಮಾತುಗಳನ್ನು ರಾಜರೂ ಸೇನಾ ನಾಯಕರೂ ಸಮರ ಸಮಯದಲ್ಲಿ ಆಡಿದ್ದರೆ, ಆಡುತ್ತಿದ್ದರೆ ಆಶ್ಚರ್ಯವೇನಿಲ್ಲ!

ವಿರಾಟಪರ್ವದಲ್ಲಿ ಬರುವ ಉತ್ತರನ ಪೌರುಷ ಪ್ರಸಂಗದಲ್ಲಿ ಪಾರ್ಥ ಅಂಜುಕುಳಿ ಉತ್ತರನನ್ನು, ಛೇಡಿಸಿ ಆಡುವ ಮಾತುಗಳು ಸಮರ ಸಮಯದಲ್ಲಿ ಹೇಡಿ ಸೈನಿಕರನ್ನು ಉದ್ದೇಶಿಸಿ ಆಡುವ ಮಾತಿನ ಮೋಡಿಯನ್ನೇ ಹೋಲುತ್ತದೆ. ಕೇವಲ ಆಡುಮಾತುಗಳನ್ನೇ ಬಳಸಿ ಪಾರ್ಥ ಉತ್ತರನನ್ನು ಛೇಡಿಸಿ ಆಡಿದ ಮಾತುಗಳನ್ನು ಕವಿ ಮನೋಜ್ಞವಾಗಿ ಚಿತ್ರಿಸಿದ್ದಾನೆ:

"ಮನದಲೊಡಲೊಡೆವಂತೆ ನಗುತರ್ಜುನನು ಗಜರಿದನೆಲವೊ ಸಭೆಯಲಿವನಜಮುಖಿಯರ ಮುಂದೆ ಸೊರಹಿದೆ ಬಾಯ್ಗೆ ಬಂದಂತೆ ಅನುವರದೊಳೇನಾಯ್ತು ರಿಪುವಾಹಿನಿಯನರಿಯದೆ ನಾಡನರಿಯವೊಲೆನಗೆನೀ ಹಲುಗಿರಿಯೆ ಬಿಡುವೆನೆ ಕಾದು ನಡೆಯೆಂದ" (ಗಭಾವಿ. ೬-೧೯).

"ಕೊಳಗುಳದೊಳೋಡಿದೊಡೆ ಹೆಜ್ಜೆಗೆ ಫಲಮಹಾ ಪಾತಕವು ಮುಂದಣಿಗೊಲಿದು ಹೆಜ್ಜೆಯನಿಡಲು ಹೆಜ್ಜೆಯೊಳಶ್ವಮೇಧದ ಫಲ ಅಳಿದನಾದೊಡೆ ದೇವ ಲೋಕದ ಲಲನೆಯರು ತೊತ್ತಿರು ಸುರೇಂದ್ರನು ನೆಲನನುಗ್ಗಡಿಸುವನು ವೀರಸ್ವರ್ಗವಹುದೆಂದ" (ಗಭಾವಿ. ೬-೨೨).

ನಾರಣಪ್ಪ ಅರ್ಜುನನಿಂದ ಆಡಿಸಿರುವ ಈ ಛೇಡಿಕೆಯ ಮಾತುಗಳು ಒಟ್ಟಿನಲ್ಲಿ ಸಮರದಲ್ಲಿ ಬೆನ್ನೊಡ್ಡುವ ಹೇಡಿ ಸೈನಿಕರಿಗೆ ಅನ್ವಯಿಸುವುದಾದರೂ ಕ್ಷತ್ರಿಯರಾದವರಿಗೆ ಕೊಳುಗುಳವೇ ಅವರ ಕಾರ್ಯಕ್ಷೇತ್ರವೆಂದೂ ಅಲ್ಲಿ ಹಿಂಜರಿಯುವವನು ಅವನು ಕ್ಷತ್ರಿಯನೇ ಎಂದು ಸಂಶಯಿಸಬೇಕಾಗುವುದೆಂದೂ ಮತ್ತೊಂದು ಪದ್ಯದಲ್ಲಿ ಉತ್ತರನನ್ನು ಕೆಣಕಿ, ಮೂದಲಿಸಿ ಆಡುವ ಸಂದರ್ಭದಲ್ಲಿ ಹೇಳುತ್ತಾನೆ:

"ಇಟ್ಟಣಿಸಿ ನರನೂರು ಹೆಜ್ಜೆಯೊಳಟ್ಟಿ ಹಿಡಿದನೇನಿದ ಮಾಡಿದೆ ಹುಟ್ಟಿದೆಯೋಹಾದರಕೆ ಕ್ಷತ್ರಿಯ ಬೀಜವೋ ನೀನು ದಿಟ್ಟತನನಿಗೆ ಹೆಂಗಳಿದಿರಲಿ ಬಿಟ್ಟುಕೊಂಡೆ ದುರಾತ್ಮ ಮುಂದೆ ವಿರಾಟನನ್ವಯವ" (ಗಭಾವಿ. ೬-೧೭).

ಕುಮಾರವ್ಯಾಸನ ಕಾವ್ಯದಲ್ಲಿ ಬರುವ ಗ್ರಾಮ್ಯ, ಅಶ್ಲೀಲ ಪದಪ್ರಯೋಗಗಳನ್ನು ಕುರಿತು, ಹಿರಿಯ ವಿದ್ವಾಂಸರೂ ವಿಮರ್ಶಕರೂ ಆದ ಡಾ|| ದೇಜಗೌ ಅವರು 'ಗದುಗಿನ ಭಾರತ ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ತಮ್ಮ ಕೃತಿಯಲ್ಲಿ (ಪುಟ ೧೪೯-೫೧) ಮಾಡಿರುವ ವಿಚಾರಮಥನ ಈ ಸಂದರ್ಭದಲ್ಲಿ ಉಲ್ಲೇಖನೀಯವೆನಿಸುತ್ತದೆ:

"ಹುಟ್ಟಿದೆಯೋಹಾದರಕೆ...." ಎಂದು ಉತ್ತರನನ್ನು ಭಂಗಿಸುವಾಗ ಆ ಮಾತು ಅವನ ಯೋಗ್ಯತೆಗೆ ತುಸು ಅತಿಯಾಯಿತೇನೋ ಎನಿಸುತ್ತದೆ. ಉತ್ತರ ತನ್ನ ಆಶ್ರಯದಾತನ ಮಗ ಎಂಬುದನ್ನು ಮರೆಯಬಾರದಷ್ಟೆ.

"ಕು. ವ್ಯಾ. ಕಾವ್ಯದಲ್ಲಿ ಪಕ್ಷಪ್ರತಿಪಕ್ಷಗಳ ಮತ್ತು ಯೋಧರ ನಡುವೆ ಪರಸ್ಪರ ಮೂದಲಿಕೆ ಮಾತುಗಳು ನಡೆದಾಗ ನಾಯಿ, ಕುನ್ನಿ, ಖೂಳ, ನಪುಂಸಕ, ಷಂಡ, ನಿಂಡ, ಹಾದರ—ಮೊದಲಾದ ಪದಗಳು ಅಡೆತಡೆಯಿಲ್ಲದೆ, ಲಂಗುಲಗಾಮಿಲ್ಲದೆ ಎರಚಾಡುತ್ತವೆ. ಈ ಮೂದಲಿಕೆಗಳು, ಬಯ್ಗುಳು ಆಯಾ ಪಾತ್ರಗಳ ಬಾಯಲ್ಲಿ ಬಂದಿರುವುದು ಅನುಚಿತವೆಂದು ತೋರುವುದಿಲ್ಲ. ಆದರೂ ಅವು ಆಡುವ ವ್ಯಕ್ತಿಗಳ ತಾತ್ಕಾಲಿಕ ಮನೋಭಾವವನ್ನು ಪ್ರತಿಬಿಂಬಿಸುತ್ತವೆ.

"ಎಂಥ ಹಿರಿಯ ವ್ಯಕ್ತಿಯಾದರೂ ಅವನ ಸುಪ್ತಪ್ರಜ್ಞೆಯಲ್ಲಿ ಹುದುಗಿರುವ ಎಳೆತನದ ಅಪಕ್ವ ಭಾವನೆಗಳು ಎಂದಾದರೂ ಒಮ್ಮೆ ಹೊರಗಿಣುಕುತ್ತವೆ ಎಂಬುದಕ್ಕೆ ಇಲ್ಲಿ ನಿದರ್ಶನಗಳು ವಿಪುಲವಾಗಿ ದೊರೆಯುತ್ತವೆ. ಇಂಥ ಮಾತುಗಳಿಂದ ಒಂದು ಕಾಲದ ಸಮಾಜದ ಯಥಾವತ್ತಾದ ಚಿತ್ರ ಈಗಿನವರಿಗೆ ಅಂತೆಯೇ ಮುಂದಿನವರಿಗೆ ದೊರಕುವಂತಾಗುತ್ತದೆ.

"ಕುಮಾರವ್ಯಾಸನದು ಸತ್ಯವನ್ನು ನಿರ್ಭೀತಿಯಿಂದ ಹೊರಹಾಕುವ ನಿರ್ದಾಕ್ಷಿಣ್ಯ ಪ್ರವೃತ್ತಿ. ಪ್ರಿಯವಾಗಲೀ, ಅಪ್ರಿಯವಾಗಲೀ ಸತ್ಯವನ್ನೇ ನುಡಿಯುವ ಛಲ ಅವನದು. ಈ ಸತ್ಯನಿಷ್ಠೆಗೆ ಒರಟುತನವೆಂದು ನಾಮಕರಣ ಮಾಡುವ ಜನ ಯಾವ ಕಾಲದಲ್ಲೂ ಇರುವಂತಹವರೆ. ನಾಗರೀಕಾಭಿರುಚಿಗೊಗ್ಗದ ಅಶ್ಲೀಲವೆನ್ನಬಹುದಾದ ಮಾತುಗಳು ಅವನಲ್ಲಿ ಒಮ್ಮೊಮ್ಮೆ ಸುಳಿಯುವುದು. ಆದರೆ ಮನಸ್ಸಿನಲ್ಲಿದ್ದುದನ್ನು ಮುಚ್ಚದೆ ಮುರಿಯದೆ ತಡೆಯದೆ ನಿಸ್ಸಂಕೋಚವಾಗಿ ನೇರವಾಗಿ ಹೇಳುವ ಸ್ವಭಾವ ಅವನದು."

# ಕೊಲ್ಹಾಪುರದ ತಾಮ್ರಶಾಸನ ಹಾಗೂ ಕವಿ ಪಂಪನ ಬಗೆಗೆ ಹೆಚ್ಚಿನ ಮಾಹಿತಿ

ಮಾಧವ ನಾ. ಕಟ್ಟಿ

ಕಳೆದ ವರ್ಷ ಮಹಾರಾಷ್ಟ್ರದ ಕೊಲ್ಹಾಪುರ ಜಿಲ್ಲೆಯ ಕೊಲ್ಹಾಪುರದಲ್ಲಿ ಒಂದು ನಾಟ್ಯಶಾಲೆಯ ತಳಪಾಯಕ್ಕೆಂದು ಅಗೆಯುತ್ತಿದ್ದಾಗ ೧೨ನೆಯ ಶತಮಾನದ ಮಧ್ಯಭಾಗಕ್ಕೆ ಸೇರಿದ ಜೈನಬಸದಿಯ ಕೆಲ ಅವಶೇಷಗಳು ಹಾಗೂ ಒಂದು ತಾಮ್ರ ಶಾಸನ ಅಲ್ಲಿ ಉಪಲಬ್ಧವಾದವು. ಅವುಗಳ ಪರಿಶೀಲನೆಗೆಂದು ಭಾರತ ಸರ್ಕಾರದ ಶಾಸನ ಇಲಾಖೆಯ ವತಿಯಿಂದ ನಾನು ಕೊಲ್ಹಾಪುರಕ್ಕೆ ಹೋಗಿ ಅವುಗಳನ್ನು ಪರೀಕ್ಷಿಸಿದೆನು.[1] ಈ ತಾಮ್ರಶಾಸನವು ಕನ್ನಡ ಸಾಹಿತ್ಯಕ್ಕೆ ಮಹತ್ವವಾದ ಕೆಲ

---

1 ಈ ಶಾಸನವು ಮೂರು ತಾಮ್ರಪಟಗಳನ್ನೊಳಗೊಂಡಿದ್ದು, ಶಿಲಾಹಾರ ಅರಸರ ಮುದ್ರಿಕೆ ಸಮೇತವಾದ ಬಳೆಯಿಂದ ಆ ಪಟಗಳು ನಿಬದ್ಧವಾಗಿವೆ.

ನನ್ನನ್ನು ಈ ಶಾಸನದ ಪರಿಶೀಲನೆಗೆಂದು ಕೊಲ್ಹಾಪುರಕ್ಕೆ ಕಳಿಸಿದ ನಮ್ಮ ವಿಭಾಗದ ನಿರ್ದೇಶಕರಾದ ಡಾ॥ ಕೆ. ವಿ. ರಮೇಶ ಅವರಿಗೆ ಹಾಗೂ ಶಾಸನವನ್ನು ಅಭ್ಯಾಸಕ್ಕೆಂದು ನನಗಿತ್ತ ಕೊಲ್ಹಾಪುರದ ಮುನಿಸಿಪಲ್ ಕಮೀಶನರ್ ಅವರಿಗೆ ನಾನು ಅತ್ಯಂತ ಋಣಿ. ಈ ಶಾಸನವನ್ನು ಡಾ॥ ರಮೇಶ ಮತ್ತು ನಾನು ಸಂಪಾದಿಸಿ 'ಪ್ರಬುದ್ಧ ಕರ್ಣಾಟಕ'ಕ್ಕೆ ಒಂದು ವಿಸ್ತಾರವಾದ ಲೇಖನವನ್ನು ಬರೆಯುವದರಲ್ಲಿದ್ದು, ಅದರಲ್ಲಿ ಇನ್ನೂ ಅನೇಕ ಐತಿಹಾಸಿಕ ಮಹತ್ವದ ಘಟನೆಗಳನ್ನು ಚರ್ಚಿಸುತ್ತೇವೆ. ಕನ್ನಡ ಸಾಹಿತ್ಯ ಪರಿಷತ್ತಿನ 'ಸಂಶೋಧನ ಕಮ್ಮಟ'ದಲ್ಲಿ ಭಾಗವಹಿಸಲು ಬೆಂಗಳೂರಿನಲ್ಲಿದ್ದಾಗ ಪ್ರಸ್ತುತ ಲೇಖನವನ್ನು 'ಪರಿಷತ್ಪತ್ರಿಕೆ'ಗಾಗಿ ಬರೆಯಲು ನನ್ನನ್ನು ಕೇಳಿದ ಪರಿಷತ್ತಿನ ಅಧ್ಯಕ್ಷರಾದ ಹಂಪ. ನಾಗರಾಜಯ್ಯ, ಅವರಿಗೂ ಇದರ ಬಗೆಗೆ ಉತ್ಸುಕತೆಯಿಂದ ನನ್ನನ್ನು ವಿಚಾರಿಸಿದ ಡಾ॥ ವೆಂಕಟಾಚಲಶಾಸ್ತ್ರೀ, ಡಾ॥ ಚಿದಾನಂದಮೂರ್ತಿ ಅವರಿಗೂ ನನ್ನ ಹೃತ್ಪೂರ್ವಕ ನಮನಗಳು ಮತ್ತು ಇದನ್ನು ಪತ್ರಿಕೆಗೆ ಕಳಿಸಲು ಅನುಮತಿ ಇತ್ತ ಡಾ॥ ರಮೇಶ ಅವರಿಗೆ ನನ್ನ ಕೃತಜ್ಞತೆಗಳು.

ವಿಷಯುಗಳನ್ನೊಳಗೊಂಡಿದೆ. ಶಾಸನವು ೧೨ನೆಯ ಶತಮಾನದ ಕನ್ನಡ ಭಾಷೆ ಮತ್ತು ಲಿಪಿಯಲ್ಲಿದೆ. ಅದರಲ್ಲಿಯ ಮುಖ್ಯ ವಿವರಗಳು ಈ ರೀತಿ ಇವೆ:

ಶಾಸನದ ಕಾಲಕ್ಕೆ ಶಿಲಾಹಾರ ಗಂಡರಾದಿತ್ಯನ ಮಗನಾದ ಮಹಾಮಂಡ ಳೇಶ್ವರ ವಿಜಯಾದಿತ್ಯನು ಔವಳವಾಡದ[2] ನೆಲೆವೀಡಿನಿಂದ ರಾಜ್ಯವಾಳುತ್ತಿದ್ದನು. ಅವನಿಗೆ ಕಪ್ಪದೇವ ಅಥವಾ ಕಪ್ಪಣಯ್ಯ ಎಂಬವನು ಮಹಾಮಾತ್ಯ, ಮಹಾ ಪ್ರತೀಹಾರ ಹಾಗೂ ಸಂಧಿವಿಗ್ರಹಿಯಾಗಿ ಸೇವೆ ಸಲ್ಲಿಸುತ್ತಿದ್ದನು. ಈ ಕಪ್ಪಣಯ್ಯನ ತಂದೆ ಕೂಚಿರಾಜ. ಕೂಚಿರಾಜನು ಸತ್ಯವೀಂದ್ರೋತ್ತಮ ಪಂಪರಾಜನ ಮೊಮ್ಮಗ. ವಿಜಯಾದಿತ್ಯನು, ತನ್ನ ಪ್ರಿಯಮಂತ್ರಿ ಕಪ್ಪದೇವನ ವಿಜ್ಞಾಪನೆಯ ಮೇರೆಗೆ, ಶಕವರ್ಷ ೧೦೭೭ನೆಯ ಭಾವ ಸಂವತ್ಸರದ ಪುಷ್ಯದ ಪುಣ್ಣಿಮೆ ಮಂಗಳವಾರ ದಂದಿನ ಸೋಮಗ್ರಹಣಪರ್ವದ ನಿಮಿತ್ತವಾಗಿ, ಕೊಲ್ಹಾಪುರದ ಬಸದಿಯ ಶಾಂತಿ ನಾಥದೇವರ ಅಷ್ಟವಿಧಾರ್ಚನೆ, ಬಸದಿಯ ಖಂಡಸ್ಫುಟಿತ ಜೀರ್ಣೋದ್ಧಾರ ಮತ್ತು ಅಲ್ಲಿಯ ಋಷಿಯರ ಆಹಾರದಾನದ ಉದ್ದೇಶಗಳಿಗಾಗಿ, ಮಿರಿಂಜೆನಾಡ ಬಳಿಯ ಸಿರಿಗುಪ್ಪೆಯ ತನ್ನ ನಾಳ್ಗಾವುಂಡಿಕೆಯ ಮಾನ್ಯದೊಳಗೆ, ಪೂರ್ವದಲ್ಲಿ (ಮುನ್ನಂ) ಕೂಚಿರಾಜಯ್ಯನು ಕೊಟ್ಟ ವೃತ್ತಿಯನ್ನು, ದೇವರ ಪುನರ್ದತ್ತಿಯಾಗಿ ಕೊಟ್ಟನು. ಶಾಸನವು ಕಪ್ಪಣಯ್ಯನ ತಂದೆ ಕೂಚಿರಾಜನೂ ಮಹಾಪ್ರತೀಹಾರ ಹಾಗೂ ಸಂಧಿ ವಿಗ್ರಹಿಯಾಗಿದ್ದನೆಂಬ ಬಗೆಗೆ ಮತ್ತು ಅವನೇ ಆ ಬಸದಿಯನ್ನು ಕಟ್ಟಿಸಿದುದರ ಬಗೆಗೆ ಉಲ್ಲೇಖಿಸುತ್ತದೆ.

ಮಹಾಮಂಡಳೇಶ್ವರ ವಿಜಯಾದಿತ್ಯನು, ಕಪ್ಪಣಯ್ಯನ ವಿಜ್ಞಾಪನೆಯಂತೆ, ಶಾಸನದ ಕೇದಿಯಂದು ಇತ್ತ ದಾನವು ಪುನರ್ದ್ದತ್ತಿಯಾಗಿದ್ದುದರಿಂದಲೂ ಆಗ ಕಪ್ಪಣಯ್ಯನು ವಿಜಯಾದಿತ್ಯನ ಮಹಾಮಾತ್ಯ (ಮುಖ್ಯಮಂತ್ರಿ) ಆಗಿದ್ದುದ ರಿಂದಲೂ ಶಾಸನದ ಕಾಲಕ್ಕೆ, ಕಪ್ಪಣಯ್ಯನ ತಂದೆ ಕೂಚಿರಾಜನು ರಾಜಸೇವೆ ಯಲ್ಲಿದ್ದಿಲ್ಲವೆಂಬುದೂ ಬಹುಶಃ ಆ ವೇಳೆಗೆ ಅವನು ಜೀವಿಸಿರಲಿಲ್ಲವೆಂಬುದೂ ಸೂಚ್ಯವಾಗಿ ಶಾಸನದಲ್ಲಿ ನಮೂದಿಸಲ್ಪಟ್ಟಿವೆ ಎಂದು ತಿಳಿಯಬಹುದು.

ಇನ್ನು ಈ ಶಾಸನದಿಂದ ತಿಳಿದು ಬರುವಂತೆ ಕನ್ನಡ ಸಾಹಿತ್ಯಕ್ಕೆ ಮುಖ್ಯ ವಾದ ವಿಷಯಗಳನ್ನು ಶಾಸನವು ಈ ರೀತಿ ಉಲ್ಲೇಖಿಸುತ್ತದೆ:

ಜಿನನಾಥಂ ತನಗಿಷ್ಟದೆಯ್ವವಧಿಪಂ ಶ್ರೀಗಂಡರಾದಿತ್ಯದೇ
ವನಿಳಾವಿಶ್ರುತ ಕೀರ್ತಿವಲ್ಲರಿವಿತಾನಂ ಸತ್ಯವೀಂದ್ರೋತ್ತಮಂ

---

2 ಇದು ಕೊಲ್ಹಾಪುರಕ್ಕೆ ಬಹಳ ಸಮೀಪದಲ್ಲಿದೆ. ಇದು ಒಳಿವಡೇ ಅಥವಾ ವಳಿವಡೇ (ವಳವಾಡ) ಎಂದು ಕರೆಯಲ್ಪಡುತ್ತದೆ—ಡಾ॥ ವಿ.ವಿ. ಮಿರಾಶಿ (ಸಂ.): *Inscriptions of the Silaharas (Corpus Inscriptionum Indicarum*, ಸಂಪುಟ III), ಪುಟ xxvii.

ತನಗಜ್ಜಂ ಕವಿ ಪಂಪರಾಜನೆನೆ ಸದ್ವಿಖ್ಯಾತಿಯಂ ಕೂಚಿರಾ
ಜನವೊಲ್ ಪೇಳ್ವಿಬಿರಾರೊ ತಾಳ್ದಿದವರೀವಿಶ್ವಂಭರಾಭಾಗದೊಳ್ ||

(ತಾಮ್ರಪಟ ೨ಬ, ಸಾಲುಗಳು ೫-

ಕೂಚಿರಾಜನ ಮಗ ಕಪ್ಪಣನ ಬಗೆಗೆ ಶಾಸನವು "ಎನೆನೆಗಳ್ದ ಕೂಚಿರಾಜ ತನಯಂ ಜಿನಸಮಯವಾರ್ಧಿ ವರ್ಧನಚನ್ದ್ರಂ, ಮನ್ಮಾರ್ಗ ನೀತಿ ನಿಪು ಜನವಿನುತಂ ಕಪ್ಪದೇವನಖಿಳಾವನಿಯೊಳ್" ಎಂದೂ ಅವನು ವಿಜಯಾದಿತ್ಯ 'ಪ್ರಿಯಮಂತ್ರಿ'ಯಾಗಿದ್ದನೆಂದೂ ತಿಳಿಸುತ್ತದೆ.

ಇದರಿಂದ ತಿಳಿಯುವದೆಂದರೆ, ಕೂಚಿರಾಜನು ಗಂಡರಾದಿತ್ಯ (ವಿಜಯಾದಿತ್ಯ ತಂದೆ)ನ ,ಸೇವೆಯಲ್ಲಿದ್ದನು ಹಾಗೂ ನಿಷ್ಠಾವಂತ ಜಿನಭಕ್ತನಾಗಿದ್ದನು; ಕೂ ರಾಜನ ಅಜ್ಜ ಜಗತ್ತಿನಲ್ಲೆಲ್ಲ ಹೆಸರುವಾಸಿಯಾದ ಸತ್ಕವೀಂದ್ರೋತ್ತಮ ಪಂ ರಾಜನಾಗಿದ್ದನು. ಅಂದರೆ ಕೂಚಿರಾಜನು ಕವೀಂದ್ರೋತ್ತಮ ಪಂಪನ ಮೊಮ್ಮ ಹಾಗೂ ಕಪ್ಪಣ ಈ ಕವಿಯ ಮೊಮ್ಮಗನ ಮಗ (ಮರಿಮಗ) ಎಂಬುದು ಸ್ಪಷ್ಟ ವಾಗುತ್ತದೆ. ಅದರಂತೆಯೇ, ಕೂಚಿರಾಜನು ಗಂಡರಾದಿತ್ಯನ ಸೇವೆಯಲ್ಲಿದ್ದುದು ಕಪ್ಪಣಯ್ಯನು ಗಂಡರಾದಿತ್ಯನ ಮಗನಾದ ವಿಜಯಾದಿತ್ಯನ ಸೇವೆಯಲ್ಲಿದ್ದುದು ತಂದೆಮಕ್ಕಳೀರ್ವ್ವರೂ ಉನ್ನತ ಪದವಿಯಲ್ಲಿದ್ದುದೂ ಸ್ಪಷ್ಟ.

ಶಾಸನದ ತೇದಿಯ ವಿವರಗಳು ಕ್ರಿ.ಶ. ೧೧೫೮, ಡಿಸೆಂಬರ್ ತಿಂಗಳ ೨೧ನೆಯ ತಾರೀಖಿಗೆ ಸರಿಹೊಂದುತ್ತಿದ್ದು, ಅಂದು ಮಂಗಳವಾರ ಹಾಗೂ ಸೂರ್ಯಗ್ರಹಣ ವಿದ್ದುದೂ ಖಚಿತವಾಗುತ್ತದೆ.[3] ಈ ಮೊದಲೇ ತಿಳಿದ ಐತಿಹಾಸಿಕ ಮಾಹಿತಿಯ ಪ್ರಕಾರ, ಈ ತೇದಿಯು ಗಂಡರಾದಿತ್ಯನ ಮಗ ವಿಜಯಾದಿತ್ಯನ ಆಳಿಕೆಗೆ ಒಳಪಟ್ಟದ್ದ ರಿಂದ ಈ ಮಹಾಮಂಡಳೇಶ್ವರ ವಿಜಯಾದಿತ್ಯನು ಶಿಲಾಹಾರವಂಶದ ವಿಜಯಾ ದಿತ್ಯನೇ ಎಂಬುದರಲ್ಲಿ ಸಂಶಯವಿಲ್ಲ. ಅವನು ಕ್ರಿ.ಶ. ೧೧೩೮ ರಿಂದ ೧೧೭೫ರವರೆ ಆಳಿದ ಬಗೆಗೆ ಈಗಾಗಲೇ ಮಾಹಿತಿ ಸಿಕ್ಕಿದೆ.[4] ಅವನ ರಾಜಧಾನಿ ಜಿವಳವಾಡು ಕೊಲ್ಹಾಪುರದ ಸಮೀಪದ ಇಂದಿನ ಒಳಿವಡೇ (ವಳಿವಡೇ) ಎಂಬುದರಲ್ಲೂ ಸಂದೇಹ ವಿಲ್ಲ.[5] ಅದರಂತೆಯೇ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಮಿರಿಂಜೆನಾಡು ಇಂದಿನ ಮಿರಜ್ ಹಾಗೂ ಇದರ ಸುತ್ತಲಿನ ಪ್ರದೇಶವೆಂಬುದೂ ಸ್ಪಷ್ಟ.

ಮಹಾಮಾತ್ಯ ಮತ್ತು ಸಂಧಿವಿಗ್ರಹಿ ಮೊದಲಾಗಿ ಉಲ್ಲೇಖಿತನಾದ ಕಪ್ಪ ದೇವ ಅಥವಾ ಕಪ್ಪಣಯ್ಯನು ಈ ಶಾಸನವನ್ನು ಹೊರಡಿಸಿದ ಕಾಲಕ್ಕೆ ಪ್ರಬುದ್ಧ

---

3 *Indian Ephemeris*, ಸಂಪುಟ III, ಪುಟ 311. ಶಕ ೧೦೭೭ ಇದನ್ನು ೧೦೭೬-೭೭ ಎಂದು ತಿಳಿಯಬೇಕು. (ಅಂದರೆ ಅದು ಪ್ರಚಲಿತ ವರ್ಷ — current year) ಆಗಿದೆ.
4 ಮಿರಾಶಿ: *C.I.I.*, ಸಂಪುಟ III, ಅದೇ ಪುಟ
5 ಅದೇ ಗ್ರಂಥ ಮತ್ತು ಪುಟ

ವಯಸ್ಕನಾಗಿದ್ದನೆಂಬುದರಲ್ಲಿ ಸಂದೇಹವಿಲ್ಲ. ಅವನ ತಂದೆ ಕೂಚಿರಾಜನು ಶಾಸನದ ಕಾಲಕ್ಕೆ ಜೀವಿಸಿದ್ದಿಲ್ಲವೆಂಬುದೂ ಸೂಚ್ಯವಾಗಿದೆ. ಕೂಚಿರಾಜನ ಅಜ್ಜನಾದ ಸತ್ಯವಿಂದ್ರೋತ್ತಮ ಪಂಪನಾರೆಂಬ ಬಗೆಗೆ ಇನ್ನು ವಿಚಾರಿಸೋಣ. ಈ ವಿಷಯವನ್ನು ಗಮನಿಸುವಾಗ ಇಬ್ಬರು ಕನ್ನಡ ಸಾಹಿತ್ಯದ ಮಹಾಕವಿಗಳ ಹೆಸರುಗಳು ನಮ್ಮೆದುರು ಬರುತ್ತವೆ. ಅದರಲ್ಲೊಬ್ಬ ೧೦ನೆಯ ಶತಮಾನದ ಮಧ್ಯಭಾಗದಲ್ಲಿದ್ದ ಕನ್ನಡದ ಆದಿ ಮಹಾಕವಿ ಪಂಪ ಹಾಗೂ ೧೧ನೆಯ ಶತಮಾನದ ಮಧ್ಯಭಾಗದಲ್ಲಿದ್ದ 'ಅಭಿನವ ಪಂಪ' ಎಂದು ಪ್ರಸಿದ್ಧನಾದ ನಾಗಚಂದ್ರ. ಇವರೀರ್ವರಲ್ಲಿ ಒಬ್ಬ ನಮ್ಮ ಶಾಸನದಲ್ಲಿ ನಮೂದಿಸಲ್ಪಟ್ಟ 'ಸತ್ಯವೀಂದ್ರೋತ್ತಮ' ಪಂಪನಿರಬಹುದೇ?

ನಮ್ಮ ಶಾಸನದಲ್ಲಿ ಕೂಚಿರಾಜನ ಅಜ್ಜ ಹಾಗೂ ಸತ್ಯವೀಂದ್ರೋತ್ತಮ ಎಂದು ಉಲ್ಲೇಖಿಸಲ್ಪಟ್ಟ ಕವಿ ಪಂಪರಾಜನು ಕನ್ನಡದ ಆದಿ ಮಹಾಕವಿ ಪಂಪನಾಗಿದ್ದಿರಬಹುದೇ ಎಂಬುದನ್ನು ಕುರಿತು ಮೊದಲು ವಿಚಾರಿಸೋಣ.

ಮಹಾಕವಿ ಪಂಪನ ಕಾಲಕ್ಕೂ ನಮ್ಮ ಶಾಸನದ ಕಾಲಕ್ಕೂ ಸುಮಾರು ೨೦೦ (ಎರಡು ನೂರು) ವರ್ಷಗಳ ಅಂತರವಿದೆ. ಸಾಮಾನ್ಯವಾಗಿ ರಾಜರ ಪೀಳಿಗೆಯ ಬಗ್ಗೆ ವಿಚಾರಿಸುವಾಗ ಒಬ್ಬ ರಾಜನ ಆಳಿಕೆ ೨೫ ರಿಂದ ೩೦ ವರ್ಷಗಳ ವರೆಗೆ ಸೀಮಿತವಾಗಿತ್ತು ಎಂಬುದು ಇತಿಹಾಸಕಾರರ ಗ್ರಹಿಕೆ. ಹೀಗಾದರೆ ಪಂಪನ ಕಾಲಕ್ಕೂ ಅವನ ಮೊಮ್ಮಗನಾದ ಕೂಚಿರಾಜನ ಮಗ ಕಪ್ಪಣಯ್ಯನ ಕಾಲಕ್ಕೂ ಸುಮಾರು ನೂರು ವರ್ಷಗಳ ಅಂತರವಿರಬೇಕು. ರಾಜರ ಆಳಿಕೆಯನ್ನು ಕುರಿತ ಗ್ರಹಿಕೆ ಕವಿಗಳಿಗೂ ಅನ್ವಯಿಸುವದೇ ಎಂಬುದು ದೊಡ್ಡ ಪ್ರಶ್ನೆ. ಒಂದು ವೇಳೆ ಪಂಪನ ಮಗ ಅಥವಾ ಮಗಳು ಅವನ ಇಳಿವಯಸ್ಸಿನಲ್ಲಿ ಜನಿಸಿ, ಅವನ (ಪಂಪನ) ಮೊಮ್ಮಗ ಹಾಗೂ ಮೊಮ್ಮಗನ ಮಗ (ಮರಿಮಗ) ಇವರೂ ತಮ್ಮ ತಂದೆತಾಯಿಗಳಿಗೆ ಅವರ ಇಳಿವಯಸ್ಸಿನಲ್ಲಿ ಜನಿಸಿದ್ದರೆ, ಪಂಪ ಹಾಗೂ ಅವನ ಮರಿಮಗ ಕಪ್ಪಣಯ್ಯನ ಕಾಲಾವಧಿಯಲ್ಲಿ ಸುಮಾರು ಎರಡನೂರು ವರ್ಷಗಳ ಅಂತರವಿರುವುದೂ ಸಾಧ್ಯ. ಹೀಗಾದರೆ ಕೂಚಿರಾಜನು ನಮ್ಮ ಅತ್ಯಂತ ಅಭಿಮಾನಾಸ್ಪದ ಕನ್ನಡದ ಆದಿ ಮಹಾಕವಿ ಪಂಪನ ಮೊಮ್ಮಗನೂ ಕಪ್ಪಣಯ್ಯನು ಅವನ (ಪಂಪನ) ಮರಿಮಗನೂ ಆಗುವರು. ಇದರಿಂದ ಈ ತಾಮ್ರಶಾಸನದಿಂದ ಮಹಾಕವಿ ಪಂಪನ ವಂಶಾವಳಿಯ ಬಗೆಗೆ ಹೆಚ್ಚಿನ ಹಾಗೂ ಮಹತ್ವದ ಮಾಹಿತಿ ಲಭಿಸಿದಂತಾಗುತ್ತದೆ. ಆದರೆ ಶಾಸನವು ಇದಕ್ಕೂ ಹೆಚ್ಚಿನ ವಿವರಗಳನ್ನು ಅಂದರೆ ಕೂಚಿರಾಜನ ತಂದೆ ತಾಯಿಗಳ ಬಗೆಗೆ, ಅವನ ಗೋತ್ರ ಮೊದಲಾದವುಗಳ ಬಗೆಗೆ ಏನೂ ತಿಳಿಸದೆ ಇರುವುದರಿಂದ ಇಲ್ಲಿ ಉಲ್ಲೇಖಿಸಲ್ಪಟ್ಟ ಸತ್ಯವೀಂದ್ರೋತ್ತಮ ಪಂಪನು ಮಹಾಕವಿ ಪಂಪನೋ ಅಥವಾ ಇನ್ನಾವನಾದರೂ ಸತ್ಯವೀಂದ್ರ ಪಂಪನೋ ಎಂದು ಹೇಳುವುದಕ್ಕೆ ಹೆಚ್ಚಿನ ಅವಕಾಶವಿಲ್ಲ. ಶಾಸನವು ಕೂಚಿರಾಜನ ತಂದೆಯ ಬಗೆಗೆ ಉಲ್ಲೇಖಿಸದೆ, ಅಜ್ಜನ ಬಗೆಗೆ ಉಲ್ಲೇಖಿಸುವುದು ಅತ್ಯಂತ ಗಮನಾರ್ಹವಾಗಿದೆ.

ಇದರಿಂದ ಕವಿ ನಿಜವಾಗಿಯೂ ಶಾಸನದ ಕಾಲದಲ್ಲೂ ಸುಪ್ರಸಿದ್ಧನಾಗಿದ್ದನೆಂಬುದು ಸ್ಪಷ್ಟ. ಶಾಸನವು ಪಂಪಕವಿಯನ್ನು 'ಇಳಾವಿಶ್ರುತ ಕೀರ್ತಿವಲ್ಲರೀವಿತಾನ' ಎಂದು ಕರೆದಿರುವುದನ್ನು ಇಲ್ಲಿ ಜ್ಞಾಪಿಸಬಹುದು. ಇಲ್ಲಿ ಉಲ್ಲೇಖಿಸಲ್ಪಟ್ಟ ಕವಿ ಪಂಪ ರಾಜನು ಕನ್ನಡದ ಆದಿ ಮಹಾಕವಿ ಪಂಪನೇ ಎಂದು ಬೇರೆ ಆಧಾರಗಳಿಂದ ಖಚಿತವಾದರೆ, ಈ ತಾಮ್ರಶಾಸನವು, ಆದಿಮಹಾಕವಿ ಪಂಪನ ಬಗೆಗೆ ಉಲ್ಲೇಖಿಸುವ ಪ್ರಥಮ ತಾಮ್ರಶಾಸನವೂ (ಜಿನವಲ್ಲಭ ಶಾಸನದ ತರುವಾಯ)[6] ಪಂಪನ ವಂಶಾವಳಿಯ ವಿವರಗಳನ್ನರಿಯುವ ಎರಡನೆಯ ಶಾಸನಾಧಾರವೂ ಆಗುತ್ತದೆ.

ಒಂದು ವೇಳೆ ಈ ಶಾಸನವು ಹೆಸರಿಸುವ ಕವೀಂದ್ರೋತ್ತಮ ಪಂಪನು ಆದಿ ಮಹಾಕವಿ ಪಂಪನಾಗಿರದಿದ್ದರೆ, ೧೧ನೆಯ ಶತಮಾನದ ಮಧ್ಯಭಾಗದಲ್ಲಿ ಜೀವಿಸಿದ್ದ ನಾಗಚಂದ್ರ[7]ನಿರಬಹುದೇ ಎಂಬುದೂ ವಿಚಾರಣೆಗೆ ಯೋಗ್ಯ. ಇತಿಹಾಸಕಾರರು ಅರಸರನ್ನು ಕುರಿತು ಗಮನಿಸುವ ಕಾಲಾವಧಿಯನ್ನು ಕವಿಗಳಿಗೂ ಅನ್ವಯಿಸಿದರೆ, ನಾಗಚಂದ್ರನ ಕಾಲಕ್ಕೂ ಈ ಶಾಸನದ ಕಪ್ಪಣಯ್ಯ ಅಥವಾ ಕಪ್ಪದೇವನ ಕಾಲಕ್ಕೂ ಸುಮಾರು ನೂರು ವರ್ಷಗಳ ಅಂತರವನ್ನು ನಾವು ಸಹಜವಾಗಿ ಪರಿಗಣಿಸಬಹುದು. ಆದುದರಿಂದ ಕೂಚಿರಾಜನ ಅಜ್ಜ ನಾಗಚಂದ್ರ (ಅಭಿನವಪಂಪ) ನಿರಬಹುದೆಂದು ತಿಳಿಯಲೂ ಅವಕಾಶವಿದೆ. ಆದರೆ ಶಾಸನವು ಕೂಚಿರಾಜನ ಅಜ್ಜನನ್ನು ನಾಗಚಂದ್ರ ಅಥವಾ 'ಅಭಿನವಪಂಪ' ಎಂದು ಹೆಸರಿಸದೆ ಸತ್ಕವೀಂದ್ರೋತ್ತಮ ಪಂಪರಾಜನೆಂದು ಮಾತ್ರ ಉಲ್ಲೇಖಿಸಿರುವುದನ್ನು ಇಲ್ಲಿ ಗಮನದಲ್ಲಿರಿಸಬೇಕು. ಈ ವಿಷಯಕ್ಕೂ ಹೆಚ್ಚಿನ ಚರ್ಚೆಗೆ ಅವಕಾಶವಿದೆ. ಈ ಶಾಸನದ ಕವಿ ಪಂಪನು ಬೇರಾವನಾದರೂ ಪಂಪನಿರಬಹುದೇ ಎಂಬ ಬಗೆಗೆ, ಈಗಿನ ಸಂದರ್ಭದಲ್ಲಿ ಹೇಳುವುದು ಅಸಾಧ್ಯವೆನಿಸಿದರೂ ಇದೂ ಪರಿಶೀಲನಾರ್ಹವೇ. ಇದಲ್ಲದೆ ಅರಸುಗಳ ಕಾಲಾವಧಿಗೆ ಪರಿಗಣಿಸುವ ೨೫–೩೦ ವರ್ಷಗಳ ಕಾಲಮಾನವೂ ಕವಿಗಳಿಗೆ ಎಲ್ಲ ಸಂದರ್ಭಗಳಲ್ಲೂ ಅನ್ವಯಿಸುತ್ತದೆಯೇ ಎಂಬ ಬಗೆಗೂ ಹೆಚ್ಚಿನ ವಿಚಾರಣೆ ಅಗತ್ಯ.

ಮೇಲಿನ ಚರ್ಚೆಯಿಂದ ತಿಳಿದುಬರುವ ಮುಖ್ಯ ವಿಷಯಗಳನ್ನು ಈ ರೀತಿ ಸಾರಾಂಶ ರೂಪದಲ್ಲಿ ಹೇಳಬಹುದು :

೧. ಈ ಶಾಸನವು ಹೆಸರಿಸುವ ಸತ್ಕವೀಂದ್ರೋತ್ತಮ ಪಂಪನು ಕನ್ನಡ ಸಾಹಿತ್ಯದ ಆದಿ ಮಹಾಕವಿ ಪಂಪನಿರಬಹುದು. ಹೀಗಾದರೆ ಅವನ

6 *Annual Report on Indian Epigraphy*, B No. 1. ಈ ಶಾಸನವು ಆಂಧ್ರ ಪ್ರದೇಶದ ಕರೀಮನಗರ ಜಿಲ್ಲೆಯ ಕುರ್ಕಿಯಾಲ್ ಎಂಬಲ್ಲಿ ಸಿಕ್ಕಿದೆ.

7 ಇವನು ಕ್ರಿ.ಶ. ೧೦೬೦ರಲ್ಲಿ ಜೀವಿಸಿದ್ದನೆಂಬ ಬಗೆಗೆ ಶಾಸನಾಧಾರವಿದ್ದು, ಇದರ ಬಗೆಗೆ ನನ್ನ ಒಂದು ಲೇಖನವು *Journal of the Epigraphical Society*, ಸಂಪುಟ xiರಲ್ಲಿ ಪ್ರಕಟವಾಗಲಿದೆ.

ವಂಶಾವಳಿಯ ಬಗೆಗೆ ಇದು ಹೆಚ್ಚಿನ ಮಾಹಿತಿಯನ್ನೀಯುವ ಪ್ರಥಮ ತಾಮ್ರಶಾಸನವೂ ಜಿನವಲ್ಲಭನ ಶಾಸನದ ತರುವಾಯ ಅವನನ್ನು ಕುರಿತು ಉಲ್ಲೇಖಿಸುವ ಎರಡನೆಯ ಶಾಸನಾಧಾರವೂ ಆಗುತ್ತದೆ.

೨. ಒಂದು ವೇಳೆ ಇಲ್ಲಿ ಉಲ್ಲೇಖಿಸಲ್ಪಟ್ಟ ಕವಿ ಪಂಪನು 'ಅಭಿನವಪಂಪ' ನಾದ ನಾಗಚಂದ್ರನೇ ಆಗಿದ್ದರೆ, ಈ ಶಾಸನವು ಆವನ ವಂಶಾವಳಿಯ ಬಗೆಗೆ ಮಹತ್ವದ ವಿವರಗಳನ್ನೀಯುವ ಪ್ರಥಮ ತಾಮ್ರಶಾಸನವಾಗುತ್ತದೆ.

೩. ಇದಲ್ಲದೆ, ಇಲ್ಲಿ ಉಲ್ಲಿಖಿತವಾದ ಸತ್ಕವೀಂದ್ರೋತ್ತಮ ಪಂಪನು ಬೇರಾವನಾದರೂ ಕವಿ ಪಂಪನಾಗಿರಬಹುದೇ ಎಂಬ ವಿಷಯದ ಬಗೆಗೂ ಹೆಚ್ಚಿನ ಶೋಧನೆ ಅಗತ್ಯ.

ಒಟ್ಟಿನ ಮೇಲೆ, ಈ ಶಾಸನವು ಓರ್ವ ಸತ್ಕವೀಂದ್ರೋತ್ತಮ ಪಂಪನ ಬಗೆಗೆ ಹಾಗೂ ಅವನ ವಂಶಜರ ಬಗೆಗೆ ಕೆಲ ಮಹತ್ವದ ವಿವರಗಳನ್ನೀಯುವ ಪ್ರಥಮ ತಾಮ್ರಶಾಸನವಾಗಿದ್ದು, ಕನ್ನಡ ಕವಿಗಳ ಚರಿತ್ರೆಯನ್ನು ರಚಿಸುವಲ್ಲಿ ಕೆಲ ಮಹತ್ವದ ಸಾಕ್ಷ್ಯಗಳನ್ನು ನೀಡುತ್ತದೆಂಬುದು ಸಂಶೋಧಕರಿಗೆ ಸಂತೋಷ ತನ್ನುಂಟುಮಾಡುವ ವಿಷಯ.

# ಸಂಸ್ಕೃತ-ಕನ್ನಡ ಲಕ್ಷಣಗ್ರಂಥಗಳ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯದ ವಿಮರ್ಶಾತ್ಮಕ ಅಧ್ಯಯನ

ಡಾ|| ಕೆ. ಕೃಷ್ಣಮೂರ್ತಿ

ಅಕ್ಕರದ ರಾಜ್ಯದಲ್ಲಿ ಸೃಜನಾತ್ಮಕ ಸಾಹಿತ್ಯಕ್ಕಿರುವಷ್ಟೇ ಮಹತ್ವ ಆ
ಸಾಹಿತ್ಯವನ್ನರಿತು ಆಸ್ವಾದಿಸಲು ನೆರವಾಗುವ ವಿಮರ್ಶನ ಸೂತ್ರಾತ್ಮಕ ಕಾವ್ಯ
ಮೀಮಾಂಸೆಗೂ ಇದೆ. ಕಾವ್ಯ ಮೊದಲು; ಕಾವ್ಯವಿಮರ್ಶೆ ಆಮೇಲೆ—ಇದು
ಪ್ರಾಯಿಕವಾಗಿ ನಿಜ. ಕನ್ನಡ ಸಾಹಿತ್ಯಕ್ಕೆ ಸಾವಿರಾರು ವರ್ಷಗಳ ಸುದೀರ್ಘ
ಇತಿಹಾಸವಿದೆ; ಆದರೆ ಅದಕ್ಕೆ ಸರಿದೊರೆಯಾದಷ್ಟು ಲಕ್ಷಣಗ್ರಂಥಗಳ ಬಾಹುಲ್ಯ
ವಾಗಲಿ, ತತ್ವಗಳ ವಿಕಾಸವಾಗಲಿ ಇಲ್ಲ. ಒಂದು 'ಕವಿರಾಜಮಾರ್ಗ', ಒಂದು
'ಕಾವ್ಯಾವಲೋಕನ', ಒಂದು 'ರಸರತ್ನಾಕರ'—ಹೀಗೆ ಎದ್ದು ಕಾಣುವ ಲಕ್ಷಣಗ್ರಂಥ
ಗಳ ಸಂಖ್ಯೆ ಬೆರಳೆಣಿಕೆಯಲ್ಲೇ ಬರುವಷ್ಟು ಪರಿಮಿತ. ಈ ಮೈಲುಗಲ್ಲುಗಳು ಕೂಡ
ಹೆಚ್ಚಾಗಿ ಸಂಸ್ಕೃತ ಲಾಕ್ಷಣಿಕರ ಜಾಡನ್ನೇ ಹಿಡಿದು ಸಾಗುವುದು ಹೆಚ್ಚು; ಸ್ವತಂತ್ರ
ವಿಚಾರ ಪ್ರಕಟಿಸುವುದು ಕಡಿಮೆ. ಆದ್ದರಿಂದ ಆಧುನಿಕ ಕನ್ನಡ ಯುಗಕ್ಕೆ ಹಿಂದಿನ
ನಮ್ಮ ಕನ್ನಡ ಸಾಹಿತ್ಯವನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಲು ಇಂದು
ನಾವು ವಿಶೇಷವಾಗಿ ಪಾಶ್ಚಾತ್ಯ ವಿಮರ್ಶೆಯ ಸೂತ್ರಗಳನ್ನೇ ಅನುಸರಿಸುತ್ತ ಸಾಗಿ
ದ್ದೇವೆಯಾದರೂ ಪ್ರಾಚೀನ ಪರಂಪರೆಯ ಹೃದಯವನ್ನು ಮನಗಂಡಾಗ ಮಾತ್ರ
ನಮ್ಮ ಅಧ್ಯಯನಕ್ಕೆ ಸಾರ್ಥಕ್ಯ ಬರುತ್ತದೆ, ಪರಿಪೂರ್ಣತೆಯೊದಗುತ್ತದೆ. ಈ ದಿಕ್ಕಿ
ನಲ್ಲಿ ನನ್ನ ವಿದ್ಯಾಗುರುಗಳಾದ ತೀ. ನಂ. ಶ್ರೀಕಂಠಯ್ಯನವರ 'ಭಾರತೀಯ ಕಾವ್ಯ
ಮೀಮಾಂಸೆ' ಒಂದು ಅಪ್ರತಿಮ ಸಹಾಯಗ್ರಂಥ. ಅವರ ನಿರೂಪಣೆಯಲ್ಲಿ ಕೂಡ
ನಮ್ಮ ಪ್ರಾಚೀನ ಸಾಹಿತ್ಯ ಕೃತಿಗಳಿಗೆ ಸಮಗ್ರವಾಗಿ ಅನ್ವಯಿಸುವ ಮೂಲ ಮಾನ

ದಂಡಗಳ ಪ್ರಸ್ತಾಪ ಕ್ವಚಿತ್ತಾಗಿಯೇ ಬಂದಿದೆ. ತಾತ್ವಿಕವಾಗಿ ಪ್ರತಿಭೆ, ವ್ಯುತ್ಪತ್ತಿ, ರಸ–ಧ್ವನಿ ಮುಂತಾದ ಪರಿಕಲ್ಪನೆಗಳ ವಿವರಣೆಗೇ ಹೆಚ್ಚು ಅವಕಾಶ ಸಿಕ್ಕಿದೆ. ಹೀಗಾಗಿ ಇನ್ನೊಮ್ಮೆ ಇವುಗಳಿಂದಾಚೆ ಇದ್ದು, ನಮ್ಮ ಕಣ್ತಪ್ಪಿಸುತ್ತಿರುವ ಮೂಲ ಚಿಂತನೆಗಳತ್ತ, ಅದರಲ್ಲಿಯೂ ವಿಶೇಷವಾಗಿ ಸಮಗ್ರ ಕಾವ್ಯವಿಮರ್ಶೆಯ ಕಾರ್ಯದತ್ತ ಕಣ್ಣು ಹಾಯಿಸುವುದು ಪ್ರಸ್ತುತವೆನಿಸುತ್ತದೆ.

ಲಕ್ಷಣಶಾಸ್ತ್ರಕ್ಕೂ ಕಾವ್ಯಕ್ಕೂ ಇರುವ ಸಂಬಂಧ ಪರಸ್ಪರ ಪ್ರೇಮದಿಂದ ಒಂದಾಗಿರುವ ದಂಪತಿಗಳ ಸಂಬಂಧವೆಂದು ಸೂಚಿಸುತ್ತ ರಾಜಶೇಖರನು ಕಾವ್ಯೋತ್ಪತ್ತಿಯ ಬಗ್ಗೆ ಒಂದು ಪುರಾಣಕಥೆಯನ್ನೇ ಬರೆದಿದ್ದಾನೆ. ವಾಗ್ದೇವಿಯ ಸುಪುತ್ರನೇ ಕಾವ್ಯಪುರುಷ. ಇವನು ಶಿಶುವಾಗಿ ಜನಿಸುವಾಗಲೇ ಶ್ಲೋಕರೂಪವಾಗಿ ತಾಯನ್ನು ವಂದಿಸುತ್ತಾನೆ. ಈ ಶಿಶುವನ್ನು ಎತ್ತಿ ಲಾಲಿಸಿದ ಶುಕ್ರಾಚಾರ್ಯರು, ವಾಲ್ಮೀಕಿ ಮಹರ್ಷಿಗಳು—ಎಲ್ಲರೂ ಮಹಾಕವಿಗಳೆನಿಸುತ್ತಾರೆ. ಇವನು ಯೌವನದಲ್ಲಿ ಕಾಲಿಟ್ಟೊಡನೆ ಅನುರೂಪಳಾದ ವಧುವೆಂದು ಸಾಹಿತ್ಯವಿದ್ಯೆಯನ್ನು ಎಂದರೆ ಲಕ್ಷಣಶಾಸ್ತ್ರವನ್ನು ಸೃಷ್ಟಿಸಿ ಪಾರ್ವತಿಯೇ ಇವರಿಬ್ಬರ ವಿವಾಹವನ್ನು ನೆರವೇರಿಸುತ್ತಾಳೆ. ಮಧುಚಂದ್ರಕ್ಕಾಗಿ ಇವರು ಹಿಮಾಚಲದಿಂದ ಹೊರಟವರು ದಕ್ಷಿಣದಲ್ಲಿ ಕನ್ಯಾಕುಮಾರಿಯವರೆಗೆ, ಪೂರ್ವ–ಪಶ್ಚಿಮ ಸಮುದ್ರಗಳ ನಡುವೆ ಇರುವ ಎಲ್ಲ ಪ್ರದೇಶಗಳಲ್ಲೂ ಬೇರೆ ಬೇರೆ ವೇಷ–ಭಾಷೆ–ಭೂಷಣಾದಿಗಳಿಂದ ತಮ್ಮ ಲೀಲೆಯನ್ನು ಮೆರೆಯುತ್ತಾರೆ. ಬೇರೆ ಬೇರೆ ಸಾಹಿತ್ಯಗಳ ವೈಚಿತ್ರ್ಯ–ವೈವಿಧ್ಯಗಳ ನಡುವೆಯೂ ಕಂಗೊಳಿಸುವ ರಸೈಕ್ಯಸೂತ್ರಕ್ಕೆ ಈ ಸತಿ–ಪತಿಗಳ ವಿವಿಧ ಲೀಲಾ–ವಿಲಾಸ–ವಿಹಾರವೇ ಕಾರಣ. ಕಾವ್ಯವೇ ಪತಿಯಾದರೆ ಲಕ್ಷಣಶಾಸ್ತ್ರವೇ ಸತಿ. ಇದು ಎಲ್ಲ ಭಾರತೀಯ ಸಾಹಿತ್ಯಗಳಿಗೂ ಅನ್ವಯಿಸುವ ಏಕಸೂತ್ರ.

ಭಾರತೀಯ ಕಾವ್ಯ–ನಾಟಕಗಳನ್ನು ಮಾತ್ರವೇ ಅಲ್ಲ, ಸಂಗೀತ–ನಾಟ್ಯ–ಶಿಲ್ಪಾದಿ ಕಲೆಗಳನ್ನು ಕೂಡ ಬಂಧಿಸುವ ಸಮಾನ ಸೌಂದರ್ಯಸೂತ್ರವೆಂದರೆ 'ರಸ'ವೇ. ನೀರಸವಾದುದು ಕಾವ್ಯವೂ ಅಲ್ಲ, ಸಂಗೀತವೂ ಅಲ್ಲ, ನಾಟ್ಯವೂ ಅಲ್ಲ; ಕಲೆಯೇ ಅಲ್ಲ. ಕಾವ್ಯಕ್ಕಿರುವ ಮೂಲಸಾಮಗ್ರಿಯೆಲ್ಲ 'ಶಬ್ದ', 'ಅರ್ಥ'ಗಳೆಂಬ ಎರಡರಲ್ಲಿ ಅಂತರ್ಗತವಾಗುತ್ತದೆ. ಇವೆರಡರಿಂದಲೇ ಎಲ್ಲ ಕಾವ್ಯಾಂಶವೂ ಅಭಿವ್ಯಕ್ತವಾಗಬೇಕು; ಬೇರೆ ದಾರಿಯಿಲ್ಲ. 'ಶಬ್ದ'ವನ್ನು ವರ್ಣ, ಪದ, ಪ್ರತ್ಯಯ, ವಾಕ್ಯ, ವಾಕ್ಯವೃಂದ, ಪ್ರಬಂಧ—ಎಂದು ಬಾಹ್ಯರೂಪದ ವಿಭಾಗಗಳ ಮೂಲಕ ನಿರ್ದೇಶಿಸಬಹುದು. 'ಅರ್ಥ'ವನ್ನು ಉದಾತ್ತ–ಸಾಧಾರಣ, ಅಥವಾ ಪೌರಾಣಿಕ–ಲೌಕಿಕ, ಶಾಸ್ತ್ರೀಯ ವ್ಯಾವಹಾರಿಕ, ಕಾಲ್ಪನಿಕ–ವಾಸ್ತವಿಕ—ಎಂದು ಮುಂತಾಗಿ ವಿಭಾಗಿಸಲೂ ಬಹುದು. ಕಾವ್ಯದ ಶೋಭೆ ಅಥವಾ ಸೌಂದರ್ಯವನ್ನು ಕೂಡ ಒಟ್ಟಂದ, ಅವಯವಗಳ ಅಂದ ಎಂದು ನಮ್ಮ ಗ್ರಹಿಕೆಗೆ ಅನುಕೂಲಿಸಲು ಬಿಡಿಸಿಕೊಳ್ಳಬಹುದು; ತಾತ್ವಿಕವಾಗಿ ವಸ್ತುನಿಷ್ಠ–ವ್ಯಕ್ತಿನಿಷ್ಠ ಎಂದೂ ಪ್ರತ್ಯೇಕಿಸಬಹುದು.

ಹೀಗೆ ಲಾಕ್ಷಣಿಕರು ವರ್ಗೀಕರಿಸುವಾಗ ಬೇರೆ ಬೇರೆ ದೃಷ್ಟಿಕೋನಗಳನ್ನು ಬಳಸುತ್ತ ದರ ಪರಿಣಾಮವಾಗಿ ಬೇರೆ ಬೇರೆ ಲಾಕ್ಷಣಿಕರ ಪ್ರಮೇಯಗಳು ಉತ್ಪನ್ನವಾಗುತ್ತವೆ. 'ಗುಣ', 'ಅಲಂಕಾರ', 'ರೀತಿ', 'ರಸ-ಧ್ವನಿ', 'ವಕ್ರೋಕ್ತಿ', 'ಔಚಿತ್ಯ', 'ಅನೌಚಿತ್ಯ ಅಥವಾ ದೋಷ'—ಇವು ಸಂಸ್ಕೃತ-ಕನ್ನಡ ಲಾಕ್ಷಣಿಕರಿಗೆಲ್ಲ ಅನ್ವಯಿ ಸುವ ಮೂಲ ಸೈದ್ಧಾಂತಿಕ ಪ್ರಮೇಯಗಳು. ಪ್ರಾಯೋಗಿಕ ಅಧ್ಯಯನಕ್ಕೆ ಇವ ಗಳಿಂದ ಆಗುವ ಉಪಕಾರವೇನೆಂಬುದನ್ನು ಕೈಮಾಡಿ ತೋರಿಸುವುದೇ ಈ ನನ್ನ ಉಪನ್ಯಾಸದ ಉದ್ದೇಶ.

ಯಾವುದೇ ಪ್ರಮೇಯವಿರಲಿ, ಮಾನದಂಡವಿರಲಿ — ಅದನ್ನು ಒಂದು ಪ್ರಕೃತ ಉದಾಹರಣೆಗೆ ಅನ್ವಯಿಸುವಾತನಿಗೆ ಇಡಿಯ ಲಕ್ಷಣಶಾಸ್ತ್ರದ ಹಿನ್ನೆಲೆಯ ಒಳನೋಟವಿರಬೇಕಾಗುತ್ತದೆ; ಸೂಕ್ಷ್ಮಸಂವೇದನೆಯಿಂದ ಅಧಿವಾಸಿತವಾದ ಕಾವ್ಯಾಭಿರುಚಿಯೂ ಇರಬೇಕಾಗುತ್ತದೆ. ಎರಡರಲ್ಲಿ ಒಂದು ಊನವಾದರೂ ಮಾನ ದಂಡವನ್ನು ಯಾಂತ್ರಿಕವಾಗಿ ಬಳಸಿ, ಸಲ್ಲದ ಅಥವಾ ಇಲ್ಲದ ಮೇಲ್ಮೆಯನ್ನೋ ಕೀಳ್ಮೆಯನ್ನೋ ಕಾವ್ಯಕ್ಕೆ ಆರೋಪಿಸುವ ದುರ್ದೈವ ಒದಗುತ್ತದೆ. ನನ್ನ ದೃಷ್ಟಿಗೆ ಬಿದ್ದ ಒಂದೆರಡನ್ನು ಇಲ್ಲಿ ಉದಾಹರಣೆಯಾಗಿ ಕೊಡುತ್ತೇನೆ.

## I

'ಕುಮಾರವ್ಯಾಸಭಾರತ' ಯಾರಿಗೆ ತಾನೆ ಪರಿಚಿತವಿಲ್ಲ? ಇದರಲ್ಲಿ ಎಲ್ಲ ಕಾವ್ಯರಸಗಳೂ ಇವೆ ಎಂದರೆ ಯಾರೂ ಪ್ರಶ್ನಿಸಲಾರರು. ಶೃಂಗಾರ, ವೀರ, ಕರುಣ, ಹಾಸ್ಯ, ಅದ್ಭುತ, ಭಯಾನಕ, ರೌದ್ರ, ಬೀಭತ್ಸ, ಶಾಂತ—ಹೀಗೆ ನವರಸಗಳೂ ಒಂದಿಲ್ಲೊಂದು ಪ್ರಸಂಗದಲ್ಲಿ ಉಕ್ಕುವುದು ನಿಜ. ಉತ್ತರಕುಮಾರನು ಪೌರುಷವನ್ನು ಹೆಂಗಳೆಯರ ಮುಂದೆ ಹಾಗೆ ಕೊಚ್ಚಿಕೊಂಡು ರಣಾಂಗಣವನ್ನು ದೂರದಿಂದ ನೋಡುವುದೇ ತಡ—ರಥದ ಹಿಮ್ಮಗ್ಗಲಿಂದ ಧುಮುಕಿ ಪಲಾಯನ ಮಾಡುವ ಸನ್ನಿವೇಶದಲ್ಲಿ ಹಾಸ್ಯ; ಕರ್ಣಾರ್ಜುನರ ಇಲ್ಲವೆ ಭೀಮ-ದುರ್ಯೋಧನರ ಕಾಳಗದಲ್ಲಿ ವೀರ-ರೌದ್ರಗಳು, ಅಭಿಮನ್ಯು ವಧೆಯ ಸಂದರ್ಭದಲ್ಲಿ ಕರುಣ—ಮುಂತಾಗಿ ರಸಸನ್ನಿವೇಶಗಳು ಕಾವ್ಯದ ತುಂಬ ಹರಡಿಕೊಂಡಿವೆ. ಆದರೆ ಎಲ್ಲವನ್ನೂ ಅತ್ತ ಸರಿಸಿ, 'ಅರಸುಗಳಿಗಿದು ವೀರ....' ಎಂಬ ಪ್ರಾಸ್ತಾವಿಕ ಪದ್ಯದಲ್ಲಿ 'ವಿರಹಿಗಳ ಶೃಂಗಾರ' ಎಂದು ಕವಿಯೇ ಉದ್ಗರಿಸಿರುವುದನ್ನು ದೊಡ್ಡದು ಮಾಡಿ—ಇದಕ್ಕೆ ಉಚಿತ ಸನ್ನಿವೇಶವಾವುದೆಂದರೆ ಪಾಂಡು-ಮಾದ್ರಿಯರ ದುರಂತ ಸಂಭೋಗ ಶೃಂಗಾರವೆಂದು ತಿವರಣೆ ಕೊಟ್ಟರೆ ಅದನ್ನು ಯಾರೇ ಕೊಟ್ಟರಲಿ—ತಪ್ಪೆನ್ನದೆ ಸಮರ್ಥಿಸಲು ಸಾಧ್ಯವಿಲ್ಲ. ಯಾರಿಗೆ ಸ್ಪರ್ಶಮಾತ್ರದಿಂದ ಮರಣಪ್ರಾಪ್ತಿಯ ಶಾಪವಿದೆಯೋ ಅಂತಹ ಪಾಂಡುವಿಗೆ ಕಾಮಾತಿರೇಕವುಂಟಾದರೆ, ಅದು ಏಕಮುಖ ಇಷ್ಟೇ ಆಗಿದ್ದು, ಮಾದ್ರಿಯ ಸಹಕಾರವಿಲ್ಲದ್ದರಿಂದ ಮತ್ತು ಮರಣಾಂತಕವಾದ್ದ

ರಿಂದ 'ಸಂಭೋಗ ಶೃಂಗಾರ'ವೆನಿಸಲೇ ಆರದು. ಇದನ್ನು ಮತ್ತಷ್ಟು ಹಿಂಜಿ, ಮುಂದೆ ದ್ರೌಪದಿ-ಕೀಚಕರ ಪ್ರಸಂಗಕ್ಕೂ ಜಯದ್ರಥ-ದ್ರೌಪದಿಯರ ಪ್ರಸಂಗಕ್ಕೂ ವಿಸ್ತರಿಸಿದಾಗ—ಹೀಗೆ ಹೆಸರಾಂತ ವಿಮರ್ಶಕ ಮಹೋದಯರೇ ಮಾಡಿದ್ದಾರೆ—ರಸಸಿದ್ಧಾಂತದ ಪರಮ ಅಜ್ಞಾನವನ್ನೇ ತೋರಿಸುತ್ತದೆ. ಏಕೆಂದರೆ 'ರಸ' ಬೇರೆ, 'ರಸಾಭಾಸ' ಬೇರೆ. ಇವೆಲ್ಲ ರಸಾಭಾಸಗಳೇ ಹೊರತು ಒಂದೂ 'ರಸ'ವೆನಿಸವು. ಎಲ್ಲಿ ಪೂರ್ಣಪ್ರಮಾಣದ ಪರಸ್ಪರಾನುರಾಗ ವಿವರವಾಗಿ ವರ್ಣಿತವಾಗಿದೆಯೋ ಅಲ್ಲಿ ಮಾತ್ರ ಶೃಂಗಾರರಸಕ್ಕೆ ಸ್ಥಾನ. ನಾಯಕನಲ್ಲಾಗಲಿ, ನಾಯಿಕೆಯಲ್ಲಾಗಲಿ ಪ್ರೇಮವಿಲ್ಲವಾದರೆ, ಇನ್ನೊಬ್ಬನ ಅಥವಾ ಇನ್ನೊಬ್ಬಳ ಕಾಮಾತಿರೇಕವೆಂಬುದು ಏಕಮುಖವಾಗಿ ನಿಂತು ಹಾಸ್ಯಾಸ್ಪದವಾಗುತ್ತದೆ; ಶೃಂಗಾರರಸವೆನಿಸಲಾರದು. ರಾಮ-ಲಕ್ಷ್ಮಣರನ್ನು ಮದುವೆಯಾಗಿರೆಂದು ಕಾಡಿ ಪೀಡಿಸುವ ಶೂರ್ಪಣಖೆಯ ಕಾಮವಾಗಲಿ, ಸೀತೆಯ ವ್ಯಾಮೋಹದಿಂದ ಹುಚ್ಚನಾಗಿರುವ ರಾವಣನ ಕಾಮುಕತೆಯಾಗಲಿ ಶೃಂಗಾರರಸಕ್ಕೆ ಉದಾಹರಣೆಯಲ್ಲ; ಶೃಂಗಾರದ ಆಭಾಸವಷ್ಟೇ ಅದು. ಹಾಗೆಯೇ, ಮಹಾಭಾರತದಲ್ಲಿ ಪಾಂಡು-ಮಾದ್ರಿ, ಸೈರಂಧ್ರಿ-ಕೀಚಕ, ಪಾಂಚಾಲಿ-ಜಯದ್ರಥಾದಿ ಸನ್ನಿವೇಶಗಳು ದುರಂತವಾದ, ಜುಗುಪ್ಸಾವಹವಾದ ಅಥವಾ ಹಾಸ್ಯಾಸ್ಪದವಾದ ಶೃಂಗಾರಾಭಾಸಗಳು. ಒಂದುವೇಳೆ ಸುಭದ್ರೆ-ಅರ್ಜುನರ ಪ್ರಚ್ಛನ್ನ ಪ್ರೇಮಸಂದರ್ಭವನ್ನು ಶೃಂಗಾರಕ್ಕೆ ಉದಾಹರಣೆಯೆನ್ನಬಹುದಾದರೂ ಮಿಕ್ಕವು ಹಾಗಾಗಲಾರವು.

ಹಾಗಾದರೆ ಕವಿಯೇಕೆ 'ವಿರಹಿಗಳ ಶೃಂಗಾರ' ಎಂದು ಬರೆದ? ಎಂಬ ಪ್ರಶ್ನೆಯೇಳುತ್ತದೆ. 'ನನ್ನ ಕಾವ್ಯದಲ್ಲಿ ವಿರಹಿಗಳ ಶೃಂಗಾರ ವರ್ಣಿತವಾಗಿದೆ' ಎಂದು ಅವನು ಹೇಳಿಯೇ ಇಲ್ಲವೆಂಬುದು ನನ್ನ ವಿಚಾರ. ಓದುಗರು ವಿರಹಿಗಳೇ ಇದ್ದರೂ ಅವರಿಗೆ ಶೃಂಗಾರದ ಆನಂದ ದೊರೆಯುವಂತೆ ನನ್ನ ಕಾವ್ಯವಿದೆಯೆನ್ನುವುದು ಕವಿಯ ಅಭಿಪ್ರಾಯ. ಇಡಿಯ ಪದ್ಯವನ್ನೇ ನೋಡಿ—

ಅರಸುಗಳಿಗಿದು ವೀರ ದ್ವಿಜರಿಗೆ
ಪರಮವೇದದ ಸಾರ ಯೋಗೀ
ಶ್ವರರ ತತ್ವವಿಚಾರ ಮಂತ್ರಿಜನಕ್ಕೆ ಬುದ್ಧಿಗುಣ |
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ ||

ಇಲ್ಲಿ ಅನೇಕ ವಾಕ್ಯಗಳಿವೆ—ಒಂದಕ್ಕೊಂದು ಸಮಾಂತರ ರೇಖೆಯಲ್ಲಿ 'ಅರಸುಗಳಿಗೆ' 'ದ್ವಿಜರಿಗೆ', 'ಮಂತ್ರಿಜನಕ್ಕೆ' ಎಂದು ಮೂರು ವಾಕ್ಯಗಳಲ್ಲಿ ಸ್ಪಷ್ಟವಾಗಿ ಚತುರ್ಥಿ

ವಿಭಕ್ತಿಯಿರುವುದರಿಂದ ಇದು ಓದುಗರಾದ ಅರಸರಿಗೆ, ದ್ವಿಜರಿಗೆ, ಮಂತ್ರಿಗಳಿಗೆ ಮಾತ್ರ ಅನ್ವಯಿಸಬೇಕು ಎಂಬುದು ನಿರ್ವಿವಾದ. ಇನ್ನು ಮೂರು ವಾಕ್ಯಗಳಲ್ಲಿ 'ಯೋಗೀಶ್ವರರ', 'ವಿರಹಿಗಳ', 'ವಿದ್ಯಾಪರಿಣತರ' ಎಂಬ ಷಷ್ಠೀವಿಭಕ್ತಿಯಿದೆ. ಇದು ಕೂಡ ಗ್ರಂಥಾರಂಭ ಪ್ರಸಂಗದಲ್ಲಿ ಓದುಗರನ್ನೇ ಕುರಿತಿರಬೇಕಲ್ಲದೆ ಕಾವ್ಯ ಪಾತ್ರಗಳಿಗಲ್ಲ; ಏಕೆಂದರೆ ಕಾವ್ಯಪಾತ್ರಗಳನ್ನು ಕವಿ ಇನ್ನುಮೇಲೆ ಸೃಷ್ಟಿಸಬೇಕಾಗಿದೆ. ಆದ್ದರಿಂದ ಈ ಮೂರು ಷಷ್ಠ್ಯಂತ ಪದಗಳಿಗೂ ಚತುರ್ಥ್ಯರ್ಥವನ್ನೇ ಕವಿ ವಿವಕ್ಷಿತವೆಂದು ಇಟ್ಟುಕೊಂಡು ಅರ್ಥ ಹೇಳಬೇಕಾದದ್ದು ಸಮಂಜಸ. ಆಗ ಇಡಿಯ ಮಹಾಭಾರತದ ನವರಸಗಳಲ್ಲಿ ಎಲ್ಲಕ್ಕಿಂತ ಹೆಚ್ಚು ಆಸ್ವಾದ್ಯವಾಗಿರುವ ರಸವೆಂದರೆ 'ಶೃಂಗಾರ'ವೆನ್ನುವ ತಪ್ಪುನಿರ್ಣಯಕ್ಕೆ ಆಸ್ಪದವುಳಿಯುವುದಿಲ್ಲ. ಆದಿಯ ಅನುಕ್ರಮಣಿಕೆ, ಮಧ್ಯದ ಭಗವದ್ಗೀತೆ, ಅಂತ್ಯದಲ್ಲಿ ಕೌರವರ ಬೀಳು ಮತ್ತು ಪಾಂಡವರ ಗೋಳು—ಎಲ್ಲವನ್ನೂ ಅನುಲಕ್ಷಿಸಿದ ಆನಂದವರ್ಧನನು ವ್ಯಾಸ ಭಾರತದ ಪ್ರಧಾನರಸ 'ಶಾಂತ' ಎಂದೇ ನಿರ್ಣಯಿಸಿದ್ದಾನೆ. ಬೇರೆ ಎಲ್ಲ ರಸಗಳಿಗೂ ಅಲ್ಲಿ ವಿಪುಲ ಅಭಿವ್ಯಕ್ತಿಯಿರುವುದು ನಿಜ. ಆದರೆ ವಿರಹಿಗಳ ಶೃಂಗಾರಕ್ಕೆ ಅಲ್ಲಿ ಪ್ರಾಧಾನ್ಯ ಖಂಡಿತ ಇಲ್ಲ.

ಇದೇ ಜಾತಿಯ ಇನ್ನೊಂದು ತಪ್ಪು ವಿಮರ್ಶೆಯ ಉದಾಹರಣೆ ನೋಡಿ: ನಮಗೆಲ್ಲ 'ಯಶೋಧರಚರಿತೆ'ಯ ಕಥೆ ಗೊತ್ತಿದೆ. ಹಂಸತೂಲಿಕಾತಲ್ಪದಲ್ಲಿದ್ದು ಉಪ್ಪವಡಿಸುವ ಮಹಾರಾಣಿ ಮೈನಾರುವ ಹೆಳವ ಆನೆ ಮಾವಟಿಗ ಅಷ್ಟವಂಕನ ಗೀತಕ್ಕೆ ಮರುಳಾಗಿ ಅವನಿಗೆ ತನ್ನ ದೇಹವನ್ನೊಪ್ಪಿಸುತ್ತಾಳೆ—ಅಭಿಸಾರಿಕೆಯಾಗಿ ತೆರಳಿ. 'ಪೊಲ್ಲಮೆಯೆ ಲೇಸು ನಲ್ಲರ ಮೈಯೊಳ್' ಎಂದು ಉದ್ಗರಿಸುತ್ತಾಳೆ. ಜನ್ನ ಅವಳ ವ್ಯಭಿಚಾರಪ್ರಸಂಗವನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿರುವುದು ನಿಜ. ಈ ವಿಕೃತಕಾಮವನ್ನು ಅತಿರಂಜಿತವಾಗಿ ವರ್ಣಿಸಿಯಾದರೂ ಅದಕ್ಕೊಳಗಾಗಬೇಡಿ ಎಂದು ಜನಕ್ಕೆ ನೀತಿಬೋಧೆ ಮಾಡುವುದು ಈ ಜೈನಕವಿಯ ವಿವಕ್ಷೆ. ಆದರೆ ಫ್ರಾಯ್ಡ್ ಮುಂತಾದವರ ಮನಶ್ಶಾಸ್ತ್ರದ ಕೆಲವೊಂದು ನೂತನ ವಿಚಾರಗಳಿಂದ ಪ್ರಭಾವಿತರಾದ ನಾವು ಅದನ್ನು ಶೃಂಗಾರರಸದ ನಿರೂಪಣೆಯೆಂದು ವ್ಯಾಖ್ಯಾನಿಸಿ ಹೊಗಳಿದರೆ, ಪ್ರಾಚೀನ ರಸಲಾಕ್ಷಣಿಕರಿಗೆ ಅನ್ಯಾಯ ಮಾಡಿದಂತಾಗುತ್ತದೆ. ಶೃಂಗಾರದ ನಿರ್ಮಲ ಸರೋವರಕ್ಕೂ ಕಾಮವಿಕಾರದ ಕೊಳಕು ತಿಪ್ಪೆಗೂ ಬಲು ದೂರ. 'ಕಾಮಾವಸ್ಥಾನ ಶೃಂಗಾರಃ' ಎಂಬುದು ಅಭಿನವಗುಪ್ತರ ಗುರುಗಳಾದ ಭಟ್ಟತೋತರ ಖಚಿತ ಕಾವ್ಯಸೂತ್ರ. ಅದನ್ನು ಗಾಳಿಗೆ ತೂರುವಂತಿಲ್ಲ.

## II

'ಪುರಾಣ' ಯಾವದೇ ಇರಲಿ, ಅದರ ಪ್ರಧಾನರಸ ಅದ್ಭುತವೇ ಇರುವುದು ಸಹಜ. ದೇವಲೋಕ-ನಾಗಲೋಕಾದಿ ಲೋಕಾಂತರದ ಲೋಕೋತ್ತರ ವೃತ್ತಾಂತ

ಗಳು, ಕಥಾಪ್ರಸಂಗಗಳು ಕಾವ್ಯದ ವಸ್ತುವಾದಾಗ ನಮ್ಮ ವಾಸ್ತವಿಕತೆಯ ಸ್ವರೂಪ ಕೂಡ ರೂಪಾಂತರ ಪಡೆಯುತ್ತದೆ. ಗಿರಿ–ದರಿ, ತರು–ಮರ, ಋತು–ಮಾರುತ, ಗ್ರಹ-ನಕ್ಷತ್ರ, ಪ್ರಾಣಿ–ಪಕ್ಷಿಸಂಕುಲ—ಇತ್ಯಾದಿಗಳನ್ನೊಳಗೊಂಡ ನಿಸರ್ಗವರ್ಣನೆ ಕೂಡ 'ಕವಿಸಮಯ'ಗಳಿಂದ ಪ್ರಭಾವಿತವಾಗಿ ಒಂದು ಕಲ್ಪನಾಲೋಕವನ್ನು ಸೃಷ್ಟಿಸುತ್ತದೆ. ಮೇಲ್ನೋಟಕ್ಕೆ ವಸಂತ, ಮಾಮರ, ಮಲ್ಲಿಗೆ—ಮುಂತಾದವು ವಾಸ್ತವಿಕವಾಗಿ ಕಂಡರೂ ಕವಿಕಲ್ಪನೆಯ ಪ್ರಭೆಯ ಆವರಣದಿಂದ ಅವು ದಿವ್ಯತೆಯನ್ನೇ ಪಡೆಯುತ್ತವೆ. ಹಿಂದಿನ ಕನ್ನಡ ಕಾವ್ಯಗಳಲ್ಲಿ ಚಂದ್ರಿಕೆ ಸ್ವಚ್ಛವಾದ ತಿಳಿನೀರೇ ಆಗುವುದರಿಂದ ಅದರಲ್ಲಿ ಕೆಲವರು ಮೀಯಬಹುದು; ಮತ್ತೆ ಕೆಲವರು ಈಜಾಡಬಹುದು; ಮತ್ತೆ ಕೆಲವರು ಕುಡಿಯಬಹುದು. ಹೂಬಿಡದ ಅಶೋಕಲತೆಯನ್ನು ಚೆಲುವೆಯರು ತಮ್ಮ ಎಡಗಾಲಿಂದ ನೇವರಿಸಿ ಹೂಬಿಡಿಸಬಹುದು. ಮಳೆಗಾಲದಲ್ಲಿ ಕಾರ್ಮೋಡ ಆಗಸದಲ್ಲಿ ಗುಡುಗುತ್ತ ವಿರಹಿಗಳಾದ ಪಾಂಥರನ್ನು ತಮ್ಮ ಮನದನ್ನೆಯರ ತೋಳ್ತೆಕ್ಕೆಗೆ ಧಾವಿಸುವಂತೆ ಮಾಡಬಹುದು. ಹೂವಿಂದ ಹೂವಿಗೆ ಮಕರಂದಕ್ಕಾಗಿ ಅಲೆಯುವ ದುಂಬಿಗಳನ್ನು ರಾತ್ರಿ ಮೊಗ್ಗಾಗುವ ಕಮಲದ ಹೂವೊಂದು ಸೆರೆಯಿಡಬಹುದು–ಬೆಳಗಾಗಿ ಅರಳುವವರೆಗೆ. ಹಂಸವು ಹಾಲುನೀರುಗಳ ಮಿಶ್ರಣ ದೊರೆತಾಗ ಹಾಲಷ್ಟನ್ನೇ ಪ್ರತ್ಯೇಕಿಸಿಕೊಂಡು ಕುಡಿದು, ನೀರನ್ನು ಕೆಳಗೆ ಉಳಿಸಬಹುದು. ಮಳೆಹನಿಯನ್ನು ಮಾತ್ರ ಕುಡಿಯುತ್ತ ಚಾತಕಪಕ್ಷಿ ಜೀವ ಹಿಡಿದಿರಬಹುದು. ಹಳ್ಳಿಯ ಅಶಿಕ್ಷಿತ ಮುಗುದೆಯರು ಪಟ್ಟಣದ ಆಗಂತುಕರನ್ನು ಜಾಣ್ಣುಡಿಗಳಿಂದ ಮೆಚ್ಚಿಸಬಹುದು. ನಾಗರ ಹೆಡೆಯಲ್ಲಿ, ಆನೆಯ ಕುಂಭಸ್ಥಲದಲ್ಲಿ ರತ್ನಗಳು ತುಂಬಿರಬಹುದು. ಮನ್ಮಥದೇವನಿಗೆ ಕಬ್ಬೇ ಬಿಲ್ಲು, ದುಂಬಿವಿಂಡೇ ಹೆದೆ; ತಾವರೆ, ಅಶೋಕ, ಮಾವು, ಮಲ್ಲಿಗೆ, ಕನ್ನೈದಿಲೆ—ಈ ಐದು ಹೂಗಳೇ ಬಾಣಗಳು; ವಸಂತನೇ ಸೇನಾಪತಿ; ಮಲಯಮಾರುತವೇ ಯುದ್ಧರಥ. ಸೂರ್ಯದೇವನಿಗೆ ಪದ್ಮಿನಿಯೇ ಇನಿಯಳು. ಅಲ್ಲದೆ ಚಿತ್ತವೃತ್ತಿಗಳಿಗೂ ಬಣ್ಣವುಂಟು: ಕೋಪ ಕೆಂಪಾದರೆ, ಯಶಸ್ಸು ಬಿಳಿಯದು. ಜೀವನದಲ್ಲಿ ಭೋಗಕ್ಕೆ ಮಾತ್ರ ಸ್ಥಾನವಲ್ಲ; ಯೋಗಕ್ಕೂ ಹೆಚ್ಚಿನ ಸ್ಥಾನವುಂಟು. ಈ ಒಂದು ಪರಿಷ್ಕೃತ ಮಹಾಕಾವ್ಯದ ಚೌಕಟ್ಟಿನಲ್ಲೇ ನಮ್ಮ ಕನ್ನಡ ಸಾಹಿತ್ಯ ಬಹಳಷ್ಟು ಕಾಲ ಬೆಳೆದಿದೆ. ಆ ಕಲ್ಪನಾಮಯ ಕಾವ್ಯ ಜಗತ್ತಿನಲ್ಲಿ ಅಲೌಕಿಕ ಛಾಯೆ ದಿನಬಳಕೆಯ ಪ್ರಸಂಗಗಳಿಗೂ ಬಂದರೆ ಅಚ್ಚರಿಯೇನೂ ಇಲ್ಲ.

ನಮ್ಮ ವಾಸ್ತವಿಕ ಜೀವನದ ಸಹಸ್ರ ಸಹಸ್ರ ಸಮಸ್ಯೆಗಳನ್ನೆಲ್ಲ ಎಲ್ಲೋ ಹಿಂದಕ್ಕೆ ಸರಿಸಿ, ಆಯ್ದ ಕೆಲವೊಂದು ಗುಣಮಂಡಿತ ದೇವನೃಪಾದಿಗಳನ್ನಷ್ಟೆ ಹಿಂದಿನವರೇಕೆ ಮುಂದಕ್ಕೆ ಚಾಚಿದರು? ಅವರಿಗೆ ವಾಸ್ತವೇತಿಹಾಸದ ಅರಿವೇಕೆ ಬೇಡಾಯಿತು? ಇದಕ್ಕೆ ಲಾಕ್ಷಣಿಕರು ಉತ್ತರ ಹೇಳಿದ್ದಾರೆ–ನಮಗದು ಒಪ್ಪಿಗೆಯಾಗದಿರಬಹುದಷ್ಟೆ- ಪ್ರಾಣಿಗಳೂ ಜೀವಿಸುತ್ತವೆ; ಮನುಷ್ಯನೂ ಪ್ರಾಣಿಗಳಂತೆ ಜೀವಿಸಿದ

ರಾಯಿತೆ ? ಮನುಷ್ಯತ್ವದ ಸಾರ ಜೀವನವೆಂದರೆ ಪ್ರಾಣಿಭಿನ್ನವಾದ ಬುದ್ಧಿಗಮ್ಯವಾದ ಚಿಂತನೆಯೇ—ಈ ತತ್ವಬೋಧನೆ ಆಚಾರದಲ್ಲಿ ಅಳವಟ್ಟಾಗಲೇ ಬಾಳು ಸಾರ್ಥಕವಾಗುವುದು. ಅದನ್ನವರು ನಾಲ್ಕಾಗಿ ವಿಂಗಡಿಸಿಕೊಂಡರು; ಧರ್ಮ, ಅರ್ಥ, ಕಾಮ, ಮೋಕ್ಷ ಎಂದು ನಾಲ್ಕನ್ನೂ 'ಪುರುಷಾರ್ಥ' ಎಂದರು. ಈ ನಾಲ್ಕರಲ್ಲಿ ಯಾವುದಕ್ಕೂ ಪರಸ್ಪರ ಬಾಧೆ ತಲೆದೋರದಂತೆ ನಾಲ್ಕನ್ನೂ ಸಮನ್ವಯಮಾಡಿಕೊಂಡು, ಇತರರಿಗೆ ಮಾರ್ಗದರ್ಶಿಯಾಗಬಲ್ಲ ಬಾಳೇ ಬಾಳು. ಈ ನಾಲ್ಕು ಗುರಿಗಳು ಶಾಶ್ವತವಾದಂಥವು. ಕಾಲದಿಂದ ಕಾಲಕ್ಕೆ, ಸಮಾಜದಿಂದ ಸಮಾಜಕ್ಕೆ ಬೇರೆಯಾಗತಕ್ಕುವಲ್ಲ. ಈ ಪುರುಷಾರ್ಥತತ್ವವನ್ನು ಶಾಸ್ತ್ರೀಯವಾಗಿ ವಿವೇಚಿಸುವ ಕಾರ್ಯ ಬೇರೆಬೇರೆ ಶಾಸ್ತ್ರಗಳದ್ದಾದರೆ, ಇವನ್ನು ಸರಸವಾಗಿ, ಸಾಲಂಕಾರವಾಗಿ, ಹೃದಯಹಾರಿಯಾಗಿ ಬಣ್ಣಿಸುವುದು ಕಾವ್ಯದ ಹೆಗ್ಗಳಿಕೆ. ಹೀಗೆ ಮಹತ್ತಾದ ವಸ್ತು-ಪಾತ್ರ-ರಸಗಳಿರುವುದರಿಂದಲೇ ಕಾವ್ಯ 'ಮಹಾಕಾವ್ಯ'ವಾಗುತ್ತದೆ; ರೂಪಕ 'ನಾಟಕ'ವಾಗುತ್ತದೆ. ಕನ್ನಡದಲ್ಲಿ 'ವಸ್ತುಕೃತಿ', 'ವಸ್ತುಕ', 'ವಸ್ತುಕಾವ್ಯ' ಎಂದುದು ಇದನ್ನೇ ದೃಷ್ಟಿಯಲಿಟ್ಟುದರಿಂದ ಇರಬೇಕು. ಈ ವಸ್ತು ಹಿಂದಿನಿಂದ ಪುರಾಣಪ್ರಸಿದ್ಧವಿರುವುದು ಪದ್ಧತಿ. ಹಾಗಲ್ಲದೆ, ಸಮಕಾಲೀನ ಮಹಾತ್ಮನೊಬ್ಬನ ಜೀವನ ಚರಿತ್ರೆಯನ್ನು ಆಧರಿಸಿ ಬರೆದ ಕೃತಿ 'ವರ್ಣಕ'ವಾಗುತ್ತದೆ. ಪಂಪನ 'ವಿಕ್ರಮಾರ್ಜುನವಿಜಯ'ದಲ್ಲಿ ವಸ್ತುಕ-ವರ್ಣಕಗಳೆರಡೂ ಸಮ್ಮಿಳಿತವಾಗಿವೆ— ಅರ್ಜುನ-ಅರಿಕೇಸರಿ ಇಬ್ಬರನ್ನೂ ಬಣ್ಣಿಸಿರುವುದರಿಂದ. ಷಡಕ್ಷರಿಯ 'ಶಬರಶಂಕರ ವಿಲಾಸ' ವಸ್ತುಕ; 'ವೃಷಭೇಂದ್ರ ವಿಜಯ'ವೂ ಅವನ ಕಾಲಕ್ಕೆ ಸುಪ್ರಸಿದ್ಧವೆಂದರೆ ವಸ್ತುಕವೇ. ಆದರೆ ಹರಿಹರನು 'ಬಸವದೇವರಾಜರ ರಗಳೆ' ಬರೆದರೆ ವರ್ಣಕ-ಕಾವ್ಯವಾಗುತ್ತದೆ. ಚಾಮರಸನ 'ಪ್ರಭುಲಿಂಗಲೀಲೆ'ಯೂ 'ವರ್ಣಕ'ವಾಗುತ್ತದೆ. ರಾಜಾಸ್ಥಾನದಲ್ಲಿ ವಸ್ತುಕವಿಗಳೂ ವರ್ಣಕವಿಗಳೂ ಬೇರೆಬೇರೆ ಇರುತ್ತಿದ್ದುದಕ್ಕೆ ಅನೇಕ ಉಲ್ಲೇಖಗಳು ದೊರೆಯುತ್ತವೆ. ಮೊದಲು 'ವರ್ಣಕ'ವೆನಿಸಿದ ಕಾವ್ಯವೇ ಕಾಲಾಂತರದಲ್ಲಿ 'ವಸ್ತುಕ'ವೂ ಆಗಬಹುದು. ಹಾಡಲು ಬರುವುದು 'ವರ್ಣಕ'ದ ವೈಶಿಷ್ಟ್ಯ. ಆದ್ದರಿಂದ ಮಾತ್ರಾಛಂದಸ್ಸುಗಳಲ್ಲಿ-ತ್ರಿಪದಿ, ರಗಳೆ, ಸಾಂಗತ್ಯ, ಷಟ್ಪದಿ-ಇತ್ಯಾದಿ—ಬಂದ ಹೆಚ್ಚಿನ ಉತ್ತರಕಾಲೀನ ರಚನೆಗಳೆಲ್ಲ ವರ್ಣಕ ಕಾವ್ಯಗಳೇ ಆದವು.

ಭಾರತೀಯ ಕಾವ್ಯಮೀಮಾಂಸೆ ಸೌಂದರ್ಯದ ವಿವಿಧ ಪರಿಗಳನ್ನು ಗುರುತಿಸಿದ್ದು ಪುರುಷನೊಬ್ಬನ ಮಾದರಿಯನ್ನಿಟ್ಟುಕೊಂಡೇ ಎನಿಸುತ್ತದೆ. ಒಬ್ಬನನ್ನು ನಾವು ಪರಿಚಯಿಸುವಾಗ ಮೊದಲು ಅವನ ಜಡ ಶರೀರಾಂಶದಿಂದ ಪ್ರತ್ಯೇಕವಾದ ಚೇತನಾಂಶವನ್ನು ಗುಮನಿಸುತ್ತೇವೆ. ಅಂತರಾತ್ಮನಿಗಾಗಿ ಬಾಹ್ಯಶರೀರವಿದೆ. ಆತ್ಮನಿಲ್ಲದ ಪುರುಷಶರೀರ ಪುರುಷನಲ್ಲ; ಹೆಣ. ಹಾಗೆಯೇ ಕಾವ್ಯದಲ್ಲಿ ಆತ್ಮದ ಸ್ಥಾನದಲ್ಲಿರುತಕ್ಕವೇ ರಸಗಳು; ರಸಗಳ ಪೂರ್ಣ ಅಭಿವ್ಯಕ್ತಿಗಾಗಿ ಶಬ್ದಾರ್ಥಮಯ ಕಾವ್ಯಶರೀರ. ಒಬ್ಬನ ವ್ಯಕ್ತಿತ್ವವನ್ನು ಅಥವಾ ವೈಶಿಷ್ಟ್ಯವನ್ನು ಸೂಚಿಸತಕ್ಕ

ಅಂಶಗಳೆಲ್ಲ ಅವನ ಗುಣಧರ್ಮಗಳು–ಶೌರ್ಯ, ವೀರ್ಯ, ಔದಾರ್ಯ ಇತ್ಯಾದಿ. ಹಾಗೆಯೇ ಕಾವ್ಯದ ಶಬ್ದಾರ್ಥಗಳಲ್ಲಿಯೂ ಪ್ರಕೃತಿ ಸಿದ್ಧವಾಗಿರುವ ಸೌಂದರ್ಯಾಂಶ ಗಳೂ 'ಗುಣ'ಗಳೇ—ಮಾಧುರ್ಯ, ಓಜಸ್ಸು, ಮುಂತಾಗಿ. ಸಹಜವಾಗಿಯೇ ಒಬ್ಬನ ಮನೋಧರ್ಮಕ್ಕೆ ಅನುಗುಣವಾಗಿರುತ್ತವೆ ಅವನ ವೇಷ, ಭಾಷೆ, ಭೂಷಾದಿಗಳೆಲ್ಲ. ಇವು ಬಾಹ್ಯಶರೀರದ ಅಲಂಕಾರಗಳು ಅಥವಾ ಶೃಂಗಾರಗಳು. ಹಾಗೆಯೇ ಕಾವ್ಯದಲ್ಲಿಯೂ ಉಪಮೆ, ರೂಪಕ, ಉತ್ಪ್ರೇಕ್ಷೆ, ಅನುಪ್ರಾಸ ಮುಂತಾಗಿ ಶಬ್ದಾರ್ಥಗಳ ಅಲಂಕಾರಗಳಿರುತ್ತವೆ. ಲೋಕವ್ಯವಹಾರದಲ್ಲಾಗಲಿ, ಶಾಸ್ತ್ರಸರಣಿ ಯಲ್ಲಾಗಲಿ ಸ್ಥಾನ ಗಳಿಸದ ಅತಿಶಯೋಕ್ತಿ, ಶ್ಲೇಷೆ, ಅಪ್ರಸ್ತುತ ಪ್ರಶಂಸೆ, ವ್ಯಾಜಸ್ತುತಿ, ವ್ಯತಿರೇಕ, ವಿರೋಧಾಭಾಸ—ಮುಂತಾದವೂ ಕಾವ್ಯದಲ್ಲಿ ಬಂದಾಗ ಅತ್ಯಂತ ಶೋಭಾಕಾರಿಗಳೆನಿಸುತ್ತವೆ. ಒಬ್ಬ ಕವಿಯ ರಚನೆಯನ್ನೆಲ್ಲ ಇಡಿಯಾಗಿ ವ್ಯಾಪಿಸುವ, ಗುಣಗಳ ಒಂದು ವಿಶಿಷ್ಟ ಸಂಘಟನೆಯೇ 'ರೀತಿ' ಅಥವಾ 'ಮಾರ್ಗ' ಅಥವಾ 'ಬಂಧ' ಎನಿಸುತ್ತದೆ. ಇಂದು ಇದನ್ನು ನಾವು 'ಶೈಲಿ' ಎನ್ನುತ್ತೇವೆ. ಮುಖ್ಯವಾಗಿ ಮಾರ್ಗಗಳಲ್ಲಿ ಎರಡು ಸ್ಫುಟವಾಗಿ ಭಿನ್ನವೆನಿಸುತ್ತವೆ—ಪ್ರಸನ್ನ-ಸುಭಗ-ಸರಲವಾದ ಕೋಮಲ ಮಾರ್ಗ ಒಂದು ; ಪ್ರೌಢ-ಗಂಭೀರ-ಜಟಿಲವಾದ ಆಡಂಬರದ ಮಾರ್ಗ ಇನ್ನೊಂದು. ಮೊದಲನೆಯದು 'ವೈದರ್ಭಿ'ಯಾದರೆ, ಎರಡನೆಯದು 'ಗೌಡೀ' ರೀತಿ. ಇದನ್ನೇ 'ಸುಕುಮಾರ-ಮಾರ್ಗ' 'ವಿಚಿತ್ರ ಮಾರ್ಗ' ಎಂದು ವ್ಯವಹರಿಸುವುದು ಕುಂತಕನ ವಿಶೇಷತೆ.

ಹೀಗೆ ಎಲ್ಲ ಕಾವ್ಯಪ್ರಕಾರಗಳಿಗೂ ಜೀವನಾಡಿಯಂತಿರುವ ಅಂತರ್ಗತ ತತ್ವವೇ ರಸ. ಅದರ ವ್ಯಾಪ್ತಿ ವಿಶಾಲವೂ ಅಹುದು ; ಪ್ರತ್ಯವಯವ ಸಂಬಂಧಿಯೂ ಅಹುದು. ಆನಂದವರ್ಧನನು ತೋರಿಸುವಂತೆ ರಸವ್ಯಂಜಕತೆ ವರ್ಣದಿಂದ ಹಿಡಿದು ಒಂದು ಪದದ ಘಟಕಗಳಾದ ಪ್ರಕೃತಿ-ಪ್ರತ್ಯಯಗಳಿಗೆ ಕೂಡ ಅನ್ವಯಿಸಿ, ಪದ, ಪದಸಮುಚ್ಚಯ, ವಾಕ್ಯ, ವಾಕ್ಯಸಮೂಹ, ಪ್ರಬಂಧ—ಹೀಗೆ ಅನೇಕ ಸ್ತರಗಳನ್ನು ವ್ಯಾಪಿಸುವಂಥದು. ಕವಿಪ್ರತಿಭೆಯನ್ನು ಕುದುರಿಸುವುದು, ಅದುರಿಸುವುದು, ಮುದು ರಿಸುವುದು—ಎಲ್ಲ ರಸಾವೇಶವೇ. ಅದೇ ರೀತಿ ಸಹೃದಯನ ಹೃದಯವನ್ನು ಆವರಿ ಸುವುದು, ಸಾವರಿಸುವುದು, ನೇವರಿಸುವುದೂ ರಸವೇ. ಈ ರಸವೆಂದರೆ ಚಿತ್ತವೃತ್ತಿ. ಚಿತ್ತವೃತ್ತಿಗಳಲ್ಲಿ ಸ್ಥಾಯಿಯಾದವೂ ಇವೆ, ಸಂಚಾರಿಗಳೂ ಇವೆ ; ಸ್ಥೂಲವಾಗಿ ಎಲ್ಲವೂ 'ಭಾವಗಳು'. ಆದರೆ ಗುಣಾಲಂಕಾರಾದಿಗಳಿಂದ ಸಂಸ್ಕೃತವಾದ ಭಾಷೆ ಯಲ್ಲಿ ಮೂಡಿಬರುವ 'ಭಾವ' ಅಥವಾ ಚಿತ್ತವೃತ್ತಿವಿಶೇಷ ರಸ್ಯಮಾನವಾಗಿ ಎಂದರೆ ಆನಂದದಾಯಕವಾಗಿ ಪರಿಣಮಿಸುವುದರಿಂದ ರಸವೆನಿಸುತ್ತದೆ. ಹೀಗೆ ರಸತತ್ವದ ಆಧಾರಸ್ತಂಭ ಎಂದರೆ ಮುಖ್ಯವಾಗಿ ಕಾವ್ಯಪಾತ್ರಗಳಾದ ನಾಯಕ-ನಾಯಿಕೆ ಮುಂತಾದ ಚೇತನರು. ಇದರ ಕಾರ್ಯಾರಂಭ-ಪ್ರಯತ್ನ-ಪ್ರಾಪ್ತ್ಯಾಶೆ-ವಿಘ್ನನಿವಾರಣೆ-ಫಲಸಿದ್ಧಿ ಎಂಬ ಕಾರ್ಯಾವಸ್ಥೆಗಳ ವರ್ಣನೆ ಒಂದು ಕಡೆ, ಕಥಾ

ವೃಕ್ಷದ ಬೀಜ-ಮೊಳಕೆ-ತಳಿರೆಲೆ-ಶಾಖೆ-ಹಣ್ಣು ಎಂಬ ಐದು ಘಟನಾ ಘಟ್ಟಗಳ ಇನ್ನೊಂದು ಕಡೆ. ಎರಡೂ ಒಂದರೊಡನೊಂದು ಸಮನ್ವಯಗೊಂಡು ಸಾಗಿದಾ ಕಾವ್ಯದ 'ವಸ್ತು' ಅಥವಾ 'ಇತಿವೃತ್ತ'ದಲ್ಲಿ 'ಮುಖ', 'ಪ್ರತಿಮುಖ', 'ಗರ್ಭ', 'ಅವಮರ್ಶ', 'ನಿರ್ವಹಣ'-ಎಂಬ 'ಪಂಚಸಂಧಿ'ಗಳಾಗುತ್ತವೆ. ಒಂದು ಕಾವ್ಯವನ್ನು ಹೋಲಿಗೆ ಬಿಚ್ಚಿ ವಿಮರ್ಶಿಸುವ ಮುನ್ನ ಕಥೆಯು ಹೊಲಿಗೆಯೆಂಥದು, ಅದರ ಕವಿವಿವಕ್ಷಿತ 'ಆಕೃತಿ' (pattern, design) ಎಂಥದು ಎಂಬುದನ್ನು ರಸಾನುಗುಣತೆಯೆಂಬ ದೃಷ್ಟಿಯಿಂದ ಪರಿಶೀಲಿಸಬೇಕಾಗುತ್ತದೆ. ಗಂಡು-ಹೆಣ್ಣುಗಳ ಪರಸ್ಪರ ಪ್ರೇಮ ನಾನಾ ಹಂತಗಳಲ್ಲಿ ಬೆಳೆಯಲವಕಾಶವಿಲ್ಲದ, ಎಂದರೆ ವಿಘ್ನಗಳು ಬಂದು ನಿವಾರಣೆಯಾಗಲು ಸಾಧ್ಯತೆಯಿಲ್ಲದ ಕಥಾಭಿತ್ತಿ ಶೃಂಗಾರಕಾವ್ಯವೊಂದಕ್ಕೆ ಉಚಿತವಸ್ತುವೇ ಆಗಲಾರದು. ಇದೇ "ರಸೋಚಿತ-ಕಥೋನ್ನಯಃ" ಎಂದು ಆನಂದವರ್ಧನನು ಸ್ಪಷ್ಟಾಕ್ಷರಗಳಲ್ಲಿ ಹೇಳುವ 'ಔಚಿತ್ಯ' ನಿಯಮ. ಔಚಿತ್ಯ ನಿರ್ಣಯದ ಕಾಲದಲ್ಲಿ ನೀತಿಯ ದೃಷ್ಟಿ ಗೌಣವಾದರೂ ಅದಕ್ಕೆ ಪ್ರವೇಶವಿದೆ; ಸೌಂದರ್ಯ ದೃಷ್ಟಿ ಪ್ರಧಾನವಾಗಿ ಅದನ್ನು ರೂಪಿಸುತ್ತದೆ. ರಸವನ್ನು ರಸಾಭಾಸ ದಿಂದಲೂ ರಸಭಂಗದಿಂದಲೂ ಬೇರ್ಪಡಿಸುವ ಏಕೈಕ ವಿಮರ್ಶನ-ಮಾನದಂಡವೇ ಕಥೌಚಿತ್ಯ ಹಾಗೂ ವರ್ಣನೌಚಿತ್ಯ. ವಸ್ತು, ಶೈಲಿ, ಪಾತ್ರ ಮೂರನ್ನೂ ಅದು ಮಾರ್ಪಡಿಸುತ್ತದೆ; ರೂಪಿಸುತ್ತದೆ.

ಔಚಿತ್ಯದ ಮಾನದಂಡದಿಂದ ಒಂದು ಕಾವ್ಯದ ಪರಾಮರ್ಶೆಗೆ ಹೊರಟವನಿಗೆ ಕವಿಯ ವಿವಕ್ಷಿತ ರಸ ಯಾವದು ಎಂದು ಮೊದಲು ಅರಿವುದು ಪ್ರಥಮ ಕರ್ತವ್ಯ. ಬಿಡಿ-ಬಿಡಿಯಾಗಿ ಕಾವ್ಯದ ಅಂಗಪ್ರತ್ಯಂಗಗಳಲ್ಲೆಲ್ಲ, ಅಂಶಾಂಶಗಳಲ್ಲೆಲ್ಲ ಇದು ಹೇಗೆ ಸಮುಚಿತ ಗುಣಬಂಧುರವಾಗಿದೆ, ಸಮುಚಿತ ಅಲಂಕಾರ ಶೋಭಿತವಾಗಿದೆ, ಸಮುಚಿತ ಮಾರ್ಗಾನುಬಂಧಿಯಾಗಿದೆ ಎಂದು ಒರೆ ಹಚ್ಚಿ ನೋಡುವುದೇ ಅವನ ಮುಂದಿನ ಕಾರ್ಯವೆಲ್ಲ. ಇದನ್ನು ಹೆಚ್ಚಾಗಿ ಹಿಂದಿನ ನಮ್ಮ ಮಹಾಕವಿಗಳೇ ಕೈಮಾಡಿ ತೋರಿಸಿದ್ದಾರೆ. ಕೆಲವೊಂದು ಉದಾಹರಣೆಗಳನ್ನು ನೋಡೋಣ:

ಉದಾಹರಣೆಗಳಲ್ಲೆಲ್ಲ ಅನುಸ್ಯೂತವಾಗಿ ನಮಗೆ ಒಮ್ಮೆಗೇ ಒಡೆದೆದ್ದು ಕಾಣುವ ಅಂಶ ರಸವಿರಲಿ, ಗುಣವಿರಲಿ, ಅಲಂಕಾರವಿರಲಿ— ಇದಕ್ಕೆಲ್ಲ ಅನ್ವಯಿಸುವ ತತ್ವ ಆನಂದವರ್ಧನನಂತೆ 'ಧ್ವನಿ'ಯೆನ್ನಲಿ, ಇಲ್ಲವೆ ಕುಂತಕನಂತೆ 'ವಕ್ರೋಕ್ತಿ'ಯೆನ್ನಲಿ, ಏನೇ ಇದ್ದರೂ ಯಾವುದನ್ನು 'ಅವಾಸ್ತವಿಕ'ವೆಂಬ ದೋಷವೆಂದು ಇಂದು ಎಣಿಸುತ್ತೇವೋ, ಅದರ ಗುಣಾತ್ಮಕವಾದ ಇನ್ನೊಂದು ಪಾರ್ಶ್ವವೇ 'ಉದಾತ್ತತೆ'. ಭರತಮುನಿಗಳ ಪ್ರಕಾರ ಉದಾತ್ತತೆಯಿದ್ದಾಗಷ್ಟೇ ಓಜೋಗುಣದ ಕಣ್ಣುಕ್ಕುವ ಆಡಂಬರವೆಲ್ಲ; ಗೌಡೀರೀತಿ—ವಿಚಿತ್ರಮಾರ್ಗಗಳ ಒಳಗುಟ್ಟೇ ಇದು. ತಟ್ಟನೆ ಶಬ್ದಾರ್ಥಗಳ ಚಮತ್ಕಾರ ನಮ್ಮನ್ನು ಆಕರ್ಷಿಸುತ್ತದೆ. ಇದನ್ನೇ 'ಆಶ್ರಯಸಂಪತ್ತು', 'ವಿಷಯಸಮೃದ್ಧಿ'— ಎಂಬ ಎರಡು ಬಗೆಯ

ಉದಾತ್ತಾಲಂಕಾರವೆಂದು ದಂಡಿ ನಿರ್ಣಯಿಸಿದನು. ಇನ್ನೊಂದು ರೀತಿಯಾಗಿ ಭಾಮಹನು ಮೂಲ ಕಥಾವ್ಯಕ್ತಿಗಳ ಉದಾತ್ತತೆ, ಅಥವಾ ಅವರುಗಳ ಕಲ್ಪಿತ ಸಹಯೋಗದಿಂದ ಕ್ಷುದ್ರ ವಿಷಯಗಳಿಗೂ ಬರುವ ಉದಾತ್ತತೆ— ಎಂದು ಇಬ್ಬಗೆಯಾಗಿ ಬಣ್ಣಿಸಿದ್ದಾನೆ.[1] ಉದಾತ್ತತೆಗೆ ವಿರುದ್ಧವಾದ ದೋಷವೇ 'ಗ್ರಾಮ್ಯತೆ' (Vulgarity). ಇದನ್ನು ಎಲ್ಲ ಲಾಕ್ಷಣಿಕರೂ ಪರಿತ್ಯಾಜ್ಯ ದೋಷವೆಂದು ಏಕಕಂಠದಿಂದ ಹೇಳಿದ್ದಾರೆ. ವಾಮನನ 'ಗುಣ'ಗಳಲ್ಲಿ ದೀಪ್ತರಸತ್ವವೂ ಒಂದು; 'ಉದಾರತೆ' ಅಥವಾ ಉದಾತ್ತತೆಯೂ ಒಂದು. ಉದ್ಭಟನು ಭಾಮಹನ ದಿಕ್ಸೂಚನೆಯನ್ನೇ ಮುಂದುವರಿಸುತ್ತಾನೆ. ಇವರೆಲ್ಲರಲ್ಲಿ ಸುಪ್ತಪ್ರಾಯವಾಗಿದ್ದ ಒಂದು ಅತ್ಯಂತ ಗಹನವಿಚಾರವನ್ನು ಮನಗೊಂಡು ಅದಕ್ಕೆ ರೂಪು ನೀಡಿದವನೆಂದರೆ ರುಯ್ಯಕ. ಎಲ್ಲ ಆಲಂಕಾರಿಕರೂ ಮೊದಲು ಉಪಮಾದಿ ಅಲಂಕಾರಗಳ ಲಕ್ಷಣ ಲಕ್ಷ್ಯ ನಿರೂಪಣೆ ಮುಗಿಸಿದ ಬಳಿಕ, ರಸವದಾದಿ ಅಲಂಕಾರಗಳ ಅಕ್ಕಪಕ್ಕದಲ್ಲಿ 'ಭಾವಿಕತ್ವ', 'ಉದಾತ್ತ' ಎಂಬ ಎರಡು ಪ್ರಬಂಧಾಲಂಕಾರಗಳನ್ನು ಗಣಿಸುತ್ತಿದ್ದರು. ಇದಕ್ಕೇನು ಕಾರಣವೆಂಬ ವಿವೇಚನೆ ಮೊದಲಿಗೆ ರುಯ್ಯಕನ 'ಅಲಂಕಾರ-ಸರ್ವಸ್ವ'ದಲ್ಲಿ ಬರುತ್ತದೆ. ಚಿತ್ತವೃತ್ತಿ ವಿಶೇಷಗಳೆಂಬ ರಸವದಾದಿ ಅಲಂಕಾರಗಳು ಕಾವ್ಯದ ಅಂತರಾತ್ಮವನ್ನಷ್ಟೇ ಕುರಿತವು; ಉಪಮಾರೂಪಕಾದಿ ಅಲಂಕಾರಗಳು ಶರೀರಾವಯವಗಳನ್ನಷ್ಟೇ ವಿವರಿಸುವಂಥವು. ಆದರೆ ಬಾಹ್ಯ-ಆಂತರ, ಅವಯವ-ಅವಯವಿ—ಎಲ್ಲವನ್ನೂ ಸಮಗ್ರವಾಗಿಯೂ ಸಂಪೂರ್ಣವಾಗಿಯೂ ವ್ಯಾಪಿಸುವ ಮೂಲ ಐಕ್ಯಸೂತ್ರವೆಂದರೆ ಉದಾತ್ತತೆಯೇ ಎಂದು ಅವನು ವರ್ಣಿಸುತ್ತಾನೆ. ಎಲ್ಲ ರೀತಿಯ ಶೋಭಾಪ್ರಕಾರಗಳಿಗೂ ಸಮುದಾಯ ಶೋಭೆ ಗಂತವ್ಯಲಕ್ಷ್ಯ; ಭಾವಿಕತ್ವವು ಹಾಗೆಯೇ; ಆದರೆ ಅದು ಕವಿಯ ಪ್ರತಿಭಾ ವ್ಯಾಪಾರಕ್ಕೆ ಅನ್ವಯಿಸತಕ್ಕದು. ಉದಾತ್ತತೆ ಮಾತ್ರ ಕಾವ್ಯದ ವಸ್ತು, ರಸ, ರೀತಿ—ಮೂರಕ್ಕೂ ಅನ್ವಯಿಸುವಂತಹದು. ಇದನ್ನೇ ಪಾಶ್ಚಾತ್ಯ ವಿಮರ್ಶೆಯನ್ನು ಕಲಿತ ನಾವಿಂದು ಲಾಂಜಿನಸ್ ಹೇಳುವ Sublimity ಅಥವಾ 'ಭವ್ಯತೆ'ಗೆ ಸಂವಾದಿಯೆಂದು ಹೇಳಬಹುದು. ಆದರೆ ಅದಕ್ಕಿಂತಲೂ ಇನ್ನೂ ಹತ್ತಿರವಾದ ಪಾಶ್ಚಾತ್ಯ ಪರಿಕಲ್ಪನೆಯೆಂದರೆ Classicalness. ಯಾವ ಏಕೈಕ ನಿಮಿತ್ತದ ಪ್ರಭಾವ ಒಂದು ಕಾವ್ಯ ಗ್ರಂಥಕ್ಕೆ ಆಚಂದ್ರಾರ್ಕಖ್ಯಾತಿಯನ್ನು ದೊರಕಿಸಿಕೊಡಬಲ್ಲದೋ ಅದೇ ಉದಾತ್ತತೆ.

---

1 ಉದಾಹರಣೆಗೆ, ಯಾವದೋ ಒಂದು ಕಗ್ಗಾಡನ್ನು ಇಲ್ಲಿ ವಿಶ್ವಾಮಿತ್ರಮುನಿಗಳು ತಪಗೈದಿದ್ದರೆಂದೋ, ಒಂದು ಕೊಳವನ್ನು ಇಲ್ಲಿ ಸೀತಾದೇವಿಯೇ ಸ್ನಾನಗೈದಿದ್ದಳೆಂದೋ, ಒಂದು ಗುಡ್ಡವನ್ನು ಇದೇ ಹನುಮಂತನೊಯ್ದಿದ್ದ ಸಂಜೀವನಪರ್ವತವೆಂದೋ ಹೇಳಿದಾಗ ಆಯಾ ವಿಷಯಗಳಿಗೆ ಉದಾತ್ತತೆ ಬರುತ್ತದೆ.

ಕನ್ನಡ ಕವಿಪ್ರವರರಿಗೆಲ್ಲ ಈ ಅಂತಸ್ತತ್ವ ಮನವರಿಕೆಯಾಗಿತ್ತು. ಅದ
ರಿಂದಲೇ ಕವಿಚಕ್ರವರ್ತಿ ರನ್ನನು 'ಅಜಿತತೀರ್ಥಂಕರ ಪುರಾಣ'ದಲ್ಲಿ–

ಸಮನಿಪ ಧರ್ಮಕ್ಕವಿರು
ದ್ಧಮರ್ಥಮರ್ಥಕ್ಕೆ ಕಾಮಮವಿರುದ್ಧಮನು |
ಕ್ರಮದೊಳ್ ಕಾಮಕ್ಕಂ ಕಡೆ
ಯ ಮೋಕ್ಷಮವಿರುದ್ಧಮೆನೆ ಚತುರ್ವರ್ಗ ಫಲಂ ||

ಅಂತು ಚತುರ್ವಿಧಪುರುಷಾರ್ಥಮಂ ವ್ಯರ್ಥಮಾಗಲೀಯದನುಭವಿಸುತ್ತು
ಚತುರ್ವಿಧರಾಜ ವೃತ್ತಮುದಾತ್ತಮಪ್ಪಂತಾಚರಿಸುತ್ತುಂ

(ಆಶ್ವಾಸ ೨, ಪದ್ಯ ೪೮)

ಎಂದು ಹೇಳುತ್ತಾನೆ. ಚತುರ್ವಿಧ ಪುರುಷಾರ್ಥಗಳು ಒಂದಕ್ಕೊಂದು ಅವಿರುದ್ಧ ವಾಗಿರಬೇಕು. ಆಗಷ್ಟೇ ಬಾಳು ಸಾರ್ಥಕ. ಹಾಗೆಯೇ ಸಾಮ, ದಾನ, ಭೇದ, ದಂಡ ಎಂಬ ನಾಲ್ಕು ರಾಜನೀತಿಗಳು ಉದಾತ್ತವಾಗಿದ್ದಾಗಲೇ ರಾಜನ ಬಾಳು ಸಾರ್ಥಕ. ಈ ಉದಾತ್ತತೆ ಪೌರಾಣಿಕ ರಾಜ, ಋಷಿ, ದೇವತಾದಿಗಳಲ್ಲಿ ಶಕ್ಯವೆಂಬ ಕಾರಣದಿಂದ ಅವರೇ ಹೆಚ್ಚಾಗಿ ಪ್ರಾಚೀನ ಕಾವ್ಯಗಳ ನಾಯಕರಾಗುತ್ತಾರೆ.

ಅಲ್ಪರು ನಾಯಕರಾದರೆ ಮಹಾಕಾವ್ಯಕ್ಕೆ ಕಳೆ ಕಟ್ಟುವುದಿಲ್ಲವೆಂಬ ಮಾತನ್ನೇ ಮಿಕ್ಕ ಕವಿಗಳೂ ಸ್ಪಷ್ಟವಾಗಿ ಹೇಳಿದ್ದಾರೆ. ಇದು ನಾಗಚಂದ್ರನ ಹೇಳಿಕೆ :

ನಾಯಕನನ್ಯನಾಗೆ ಕೃತಿ ವಿಶ್ರುತಮಾಗದುದಾತ್ತ ರಾಘವಂ
ನಾಯಕನಾಗೆ ವಿಶ್ರುತಮಪ್ಪುದು ವಿಸ್ಮಯಕಾರಿಯಲ್ತು ಕಾ
ಲಾಯಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನೆಮಾಲೆಯಂತುಪಾ
ದೇಯಮೆನ್ನಿಕ್ಕುಮೇ ? ವಿಷಯಮೊಪ್ಪದೊಡಾವುದು ಮೊಪ್ಪಲಾರ್ಕುಮೇ ?

ರುದ್ರಭಟ್ಟನು ಶ್ರೀಕೃಷ್ಣನ ಚರಿತ್ರೆಯನ್ನಾಯ್ದುಕೊಳ್ಳಲು ಅವನ ನಿರತಿಶಯ ಮಹಿಮೋನ್ನತಿ ಅಥವಾ ಉದಾತ್ತತೆಯೇ ಕಾರಣ :

ಏದೊರೆ ಪೆಂಪೊ ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪ
ದ್ಮೋದಕಮಿಂದ್ರಮುಖ್ಯ ದಿವಿಜರ್ ಸ್ವಪರಿಗ್ರಹಮಬ್ಜಜಂ ಸ್ವಕೀ
ಯೋದರಪದ್ಮಯೋನಿಭವನಾತ್ಮ ತನೂಭವನೆಂದೆನಿಪ್ಪ ದು
ಗ್ಧೋದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲಮೇಂ ?

ಧರ್ಮಕತೆಯನ್ನು ಹೇಳಿಸುವ ದಾನಚಿಂತಾಮಣಿ ಅತ್ತಿಮಬ್ಬೆಯ ಗುಣಶ್ರೇಣಿಯನ್ನು ರನ್ನನಿಗೆ ಬಣ್ಣಿಸಿದಷ್ಟೂ ಸಂತೃಪ್ತಿಯಿಲ್ಲ. ಒಂದು ಪದ್ಯವನ್ನು ನೋಡಿ :

ರಣದೊಳ್ ಮಾರಾಂತ ಚೂಡಾಮಣಿಗೆ ಮಣಿಯದುದ್ವೃತ್ತನಂ ಗೆಲ್ದ ವಿದ್ಯಾ
ಮಣಿ ವೀರಾರಾತಿರಕ್ಷಾಮಣಿ ನಿಖಿಳವಿನೇಯಾಗ್ರಗಣ್ಯೈಕ ಚೂಡಾ
ಮಣಿ ಧರ್ಮಾಂಭೋಜಷಂಡದ್ಯುಮಣಿ ಬುಧಜನಪ್ರೀಣನಾಗ್ರೇಸರ ಗ್ರಾ
ಮಣಿಯಾದಂ[2] ದಾನಚಿಂತಾಮಣಿ ಗುಣಮಣಿ ನಿಶ್ರೇಣಿಕಾಶ್ರೇಣಿಯಿಂದಂ ||
(ಅಜಿತಪುರಾಣ, ಸಮಾಪ್ತಿ ಪದ್ಯಗಳು).

ಒಂದು ಒಡ್ಡೋಲಗವನ್ನು ಅವನು ಬಣ್ಣಿಸಹೊರಟರೆ ಸಾಕು, ಸಕಲ ರಸಗಳಿಗೂ ಅಲ್ಲಿ ಸಮಾವೇಶ ಉಂಟೆಂಬುದನ್ನು ಸೂಚಿಸಲು ರನ್ನನು ಮರೆಯುವುದಿಲ್ಲ :

ವೀರರಸಂ ಭಟರೊಳ್ ಶೃಂ
ಗಾರರಸಂ ಪೆಂಡವಾಸದೊಳ್, ಶಾಂತರಸಂ |
ಸಾರಿರ್ದ ನಿಯೋಗಿಗಳೊಳ್
ಚಾರಣಗಣದೊಳ್ ನಿರಂತರಂ ಹಾಸ್ಯರಸಂ ||

ಧುರದೊಳ್ ಬೀಭತ್ಸರಸಂ
ಕರುಣಭಯಾನಕರಸಂ ಪದಾನತರೊಳ್ ರೌ |
ದ್ರರಸಂ ದಾಯಿಗರೊಳ್ ವುದಿ
ದಿರೆ ನೆಗಟ್ಟಿದ್ಭುತರಸಂ ಕಥಾಗೋಷ್ಠಿಗಳೊಳ್ ||

ಮಹಾಕವಿಗಳು ಆಯ್ದುಕೊಳ್ಳುವ ವಸ್ತುವಿನಲ್ಲಿ, ಅದಕ್ಕೆ ಅಂಗವಾದ ಹದಿನೆಂಟು ವರ್ಣನೆಗಳಿಗೆ ಅವಕಾಶವಿರುವಂತೆ ಅವರು ಎಚ್ಚರ ವಹಿಸುತ್ತಾರೆ. ಇದೇ ಅವರ ರಸಸೃಷ್ಟಿ ಅಥವಾ ಔಚಿತ್ಯಪ್ರಜ್ಞೆ.

ಕವಿರಾಜಮಾರ್ಗಕಾರನಂತೂ ವೀರರಸ ಉದಾರತಮವೆಂದೂ ಈದರ ಅಭಿವ್ಯಕ್ತಿಗೆ 'ಸ್ಫುಟೋಕ್ತಿ' ಪ್ರಯೋಜಕವೆಂದೂ ನಿರ್ದೇಶಿಸಿದ್ದಾನೆ :

ವೀರರಸಂ ಸ್ಫುಟೋಕ್ತಿಯಿನುದಾರತಮಂ, ಕರುಣಾರಸಂ ಮೃದೂ
ಚ್ಚಾರಣೆಯಿಂದಮ್ . . . (II. ೯೯).

ಇಲ್ಲಿಯೂ 'ಉದಾರತಮ' ಎಂದರೆ ಉದಾತ್ತವೆಂದೇ ಕವಿವಿವಕ್ಷಿತ ಅಭಿಪ್ರಾಯ. ಕಾವ್ಯಾವಲೋಕಕಾರನಾದ ನಾಗವರ್ಮನು ತನ್ನನ್ನು—

'ವಾಕ್‌ಶ್ರೀ–ನಿವಾಸಾಂಬುಜಾಯಿತ ವಕ್ತ್ರಂ' ಎಂದು ಮಾತ್ರವಲ್ಲದೆ,
'ರಸಭಾವ-ಭಾಸುರ–ಸಮುದ್ಯದ್–ಭಾರತೀ ನರ್ತನೋಚಿತರಂಗ ಪ್ರತಿಮಾನನಂ'

---

2 ಆದಂ=ಅತ್ಯಂತವಾಗಿ ಎಂಬರ್ಥ ಅವ್ಯಯವಿದು; ಇಲ್ಲಿ ಕ್ರಿಯಾಪದವಲ್ಲ.

ಎಂದೂ ವಿಶೇಷಿಸಿಕೊಂಡಿದ್ದಾನೆ. 'ಅನೂನಕವಿತಾಗುಣೋದಯ' ಎಂಬುದು ಅವನ ಇನ್ನೊಂದು ಬಿರುದು, ಪಂಪನಿಗೆ 'ಗುಣಾರ್ಣವ' ಎಂಬ ಬಿರುದಿನಂತೆ. 'ಭಾವಿಕ'ವನ್ನು ಪ್ರಬಂಧಾಲಂಕಾರವೆಂದು ಆತನು ಒಪ್ಪಿದ್ದರಿಂದಲೇ ಅದು ವಸ್ತು, ಶೈಲಿ, ರಸವೃತ್ತಿ ಎಲ್ಲಕ್ಕೂ ಅನ್ವಯಿಸುವುದೆಂದಷ್ಟೇ ಹೇಳಿ, ಪ್ರತ್ಯೇಕ ಉದಾಹರಣೆಯ ಅಗತ್ಯವಿಲ್ಲವೆಂದು ಕೈಬಿಟ್ಟಿದ್ದಾನೆ—

ಸ್ಥಾನೋಪವರ್ಣನಂ ಶ
ಬ್ದಾನಾಕುಳಭಾವ ಮದ್ಭುತಾರ್ಥತ್ವಂ ಸ್ವಾ
ಧೀನರಸವೃತ್ತಿ ಸಂಬಂ
ಧಾನುಗಮಂ ಭಾವಿಕಕ್ಕೆ ಭಾವಮಿವಕ್ಕುಂ ||

(III. ೧೮೬-ಸಮಾಪ್ತಿ ಪದ್ಯ)

ಇಡಿಯ 'ಪಂಪಭಾರತ' ಮುಂತಾದ ಕಾವ್ಯಗಳನ್ನು ಮಾತ್ರ ಉದಾಹರಣೆಯೆನ್ನಬಹುದೇ ಹೊರತು, ಕಾವ್ಯದ ಯಾವ ಏಕದೇಶವನ್ನೂ ಅಲ್ಲ. ಇದು ಕವಿಭಾವಕ್ಕೆ ಅನ್ವಯಿಸುವುದರಿಂದ 'ಭಾವಿಕ'; ಇದರ ಫಲವಾಗಿ ಕಾವ್ಯದಲ್ಲಿ ಕೋರೈಸುವ ಗುಣವೇ ಉದಾತ್ತ.

ಇಲ್ಲಿಯವರೆಗೆ ರಸ-ಗುಣಾದಿಗಳು ಕಾವ್ಯದ ಸಮುದಾಯಶೋಭೆಗೆ ನಿಯಾಮಕಗಳೆಂಬುದನ್ನು ಸೂಚಿಸಲಾಯಿತು. ಈಗ ಪ್ರತ್ಯವಯವಶೋಭೆಗೆ ಪ್ರಯೋಜಕಗಳಾದ ಅಲಂಕಾರಗಳನ್ನು ಗಮನಿಸೋಣ:

ಕನ್ನಡದ ನುಡಿಯ ಒಡಲಲ್ಲೇ ಅಥವಾ ಮಡಿಲಲ್ಲೇ ಸಹಜಪ್ರಾಸದ ಒಂದು ಬೆಡಗಿದೆ. ಇದನ್ನು ಗಮನಿಸಿ ಧಾರಾಳವಾಗಿ ಅದನ್ನು ಬಳಸಿದ ಜಾಣ್ಮೆ ಕವಿಗಳದು. ಅದು ಇಂದಿನ ಪದ್ಯದಂತೆ ಗದ್ಯದಲ್ಲೂ ತನ್ನ ಸೊಬಗನ್ನು ಸೂಸುತ್ತಿದೆ. ಓಡುವ ಚಿನ್ನದ ಜಿಂಕೆಯ ಗತಿಯನ್ನೂ ದ್ಯುತಿಯನ್ನೂ ಸೆರೆಹಿಡಿಯುವ ಈ ಕಂದದ ಅಂದವನ್ನು ನೋಡಿ:

ಬೆಳಗುಗಳ ಬಳಿದ ಬಳಗದ
ಬಳಸುಗಳೊಳಗೊಳಗೆ ತೊಳಗಿ ಪೊಳೆಪೊಳೆದೊಳಗು-
ಚ್ಚಳಿಸಿ ತಳತಳಿಸಿ ದೆಸೆಗಳ
ನಳುರ್ದುಗಿರೊಳ್ ಕೆಳರ್ದು ಮಿಳಿರ್ದು ತಳರ್ದತ್ತಾಗಳ್ ||

ಈ ಸೊಬಗು ಪರಿವೃತ್ತಿಸಹವಲ್ಲ. ಈ ಕಂದವನ್ನು ಅಂದಗೆಡದಂತೆ ಸಂಸ್ಕೃತಕ್ಕಾಗಲಿ, ಬೇರೊಂದು ಭಾಷೆಗಾಗಲಿ ಅನುವಾದ ಮಾಡಲು ಎಂತಹ ಪ್ರತಿಭಾವಂತನಿಗೂ ಶಕ್ಯವಿಲ್ಲ. ಇದು ಶಬ್ದಾನುಪ್ರಾಸವಾಯಿತು. ಆದರೆ ಅರ್ಥಾಲಂಕಾರದ ಸೊಬಗು ಇಷ್ಟು ಮೇಲೆ ಮೇಲೆ ಕಾಣುವಂಥದಲ್ಲ; ಸ್ವಲ್ಪ ಬುದ್ಧಿಯನ್ನೋಡಿಸಿ ಅದರ

ಚಮತ್ಕಾರವನ್ನು ಗುರುತಿಸಿ ಸವಿಯಬೇಕಾಗುತ್ತದೆ. ರಸಾವೇಶದಿಂದ ಪ್ರಭಾವಿತನಾಗಿ ಬರೆವ ಕವಿಗೆ ಯಾವ ಹೆಚ್ಚಿನ ಪ್ರಯತ್ನವೇ ಇಲ್ಲದೆ ಅವು ಮೇಲ್ವಾಯ್ದು ಬರುವಂತೆ ತೋರುತ್ತದೆ. ವೈರಾಗ್ಯದಿಂದ ತಪೋನುಷ್ಠಾನಕ್ಕೆ ಮನದಂದು ಪ್ರಿಯೆಯರನ್ನು ಅಗಲಿಹೋಗುತ್ತಿರುವ ಸನ್ನಿವೇಶವನ್ನು ರನ್ನ ಬಣ್ಣಿಸುವಾಗ ಕಾಂತೆಯರ ಪ್ರಲಾಪವನ್ನು ಬಣ್ಣಿಸುತ್ತಾನೆ— ಎದೆ ಕರಗುವಂತೆ. ಇದು ಹೀಗೆ ಅಪ್ರಯತ್ನಸಿದ್ಧವಾದಂತೆ ತೋರುತ್ತದೆಂದು ನೋಡಿ : ಅವರು ಅರೆಹುಚ್ಚನಿಂದಲೋ ಎಂಬಂತೆ ಜಡ ತರುಲತಾದಿಗಳೊಡನೆ ಮಾತನಾಡುತ್ತಿದ್ದಾರೆ—

ಲಲಿತಲತಾಲಯಂಗಳಿರ ! ಸುಂದರಕಾನನಚಂದ್ರನದ್ರುಮಂ
ಗಳಿರ ! ತಳಿರ್ತಶೋಕೆಗಳಿರಾ ! ಸಹಕಾರತಮಾಲ ಭೂರುಹಂ|
ಗಳಿರ ! ವಿಯೋಗಮಾದುದೆಮಗಂ ನಿಮಗಂ ಬೆಸಕೆಯ್ವೆಮೆಂದು ವಿ
ಹ್ವಳೆಯರಗಳ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ ||
(ಅಜಿತಪುರಾಣ, vi. ೧೧೧)

ಎಲೆ ಪರಪುಷ್ಟ ಕೇಳೆಲೆ ಮಧುವ್ರತ ಕೇಳೆಲೆ ರಾಜಕೀರ ಕೇ
ಳೆಲೆ ಕಳಹಂಸೆ ಕೇಳೆಲೆ ಸರೋಜಿನಿ ಕೇಳೆಲೆ ಚೂತರಾಜ ಕೇ
ಳೆಲೆ ವನರಾಜ ಕೇಳ್ ನೆನೆಯುತಿರ್ಪುದು ಕೂರ್ಪುದು ಸೈರಿಸಿರ್ಪುದ
ಗ್ಗಲಿಸಿದ ನಲ್ಮೆ ತಣ್ಮಲೆಯೆ ಬೆನ್ನನೆ ಪೋದಪೆಮೆಮ್ಮ ಸಾಮಿಯಾ ||
(ಅಲ್ಲಿಯೇ-೧೧೨)

ಈ ಸುದತಿಯರು ಅಗಲಲೊಪ್ಪದೆ ತಾವೂ ಪತಿಯೊಂದಿಗೆ ವನಗಮನಕ್ಕಾಗಿ ಹೊರಟಾಗಿ ಕೊನೆಯ ಸಲ ತಮ್ಮ ಅಚ್ಚುಮೆಚ್ಚಿನ ತೋಟದ ಗಿಡಮರಗಳನ್ನೂ ಪ್ರಾಣಿಪಕ್ಷಿಗಳನ್ನೂ ಬೀಳ್ಕೊಳ್ಳುವ ಸನ್ನಿವೇಶ. ಈ ಕರುಣರಸೋಚಿತವಾಗಿ ಇಲ್ಲಿರುವ ಸುಕುಮಾರ ಪದಬಂಧ ಯಾರನ್ನಾದರೂ ತಲೆದೂಗಿಸುವಂತಿದೆ. ಇಲ್ಲಿ ಅಚೇತನ ವಸ್ತುಗಳಿಗೆ ಚೈತನ್ಯ ನೀಡಿ ಅವುಗಳನ್ನು ನೀವು 'ನೆನೆಯುತ್ತಿರಿ','ಮರೆಯದಿರಿ', 'ಸೈರಿಸಿರಿ' ಎಂದೆಲ್ಲ ಅಂಗಲಾಚಿ ಬೇಡುವಾಗ ಇರುವ ಸಮಾಸೋಕ್ತಿಯೆಂಬ ಅಲಂಕಾರದ ಸುಳಿವೇ ಯಾರಿಗೂ ತಿಳಿಯುವುದಿಲ್ಲ. ಕರುಣರಸದ ಪ್ರವಾಹ ಅಲಂಕಾರಗಳನ್ನು ಮರೆಸುವಷ್ಟು ವೇಗದಿಂದ ಸಾಗಿದೆ. ಹಾಗೆಯೇ 'ವಿನೋಕ್ತಿ' ಅಲಂಕಾರದ ಛಾಯೆಯನ್ನು ನೋಡಿ :

ಇಂಪಿಲ್ಲದ ಕೇದಗೆಯಂ
ಕಂಪಿಲ್ಲದ ಪೂ ಸುಪುತ್ರನಿಲ್ಲದ ಭವನಂ |
ಪೆಂಪಿಲ್ಲದ ಕುಲವಧು ಗೃಹ
ಸಂಪತ್ತಿಲ್ಲದ ವಿಳಾಸಮೇನೊಪ್ಪುಗುಮೇ |

ರಸಮಿಲ್ಲದ ಕೃತಿ ದಾನ
ವ್ಯಸನಂ ತಗಿಲ್ಲದರಸಂ....

ಘೃತಮಿಲ್ಲದೂಟಮೇನೊಪ್ಪುಗುಮೇ |
ನಾಯಿಕವಿಲ್ಲದ ತೊಡವು+ಇನ
ನಾಯಕನಿಲ್ಲದ ದಿನಾವಸಾನಂ ಪುಣ್ಯ
ಶ್ರೀಯಿಲ್ಲದ ಪೆರ್ಚ್ಛ ಮದ
ಶ್ರೀಯಿಲ್ಲದ ಗಜಮದೇಂ ಮನಂಗೊಳಿಸುಗುಮೇ ||

ಚಲಮಿಲ್ಲದ ಗಂಡಂ ತಂ
ಬುಲವಿಲ್ಲದ ವದನ+ಮಾಯಮಿಲ್ಲದ ತುಟಿಲಾಳ್ |
ಫಲಮಿಲ್ಲದ ತರು ಶೀತಲ
ಜಲಮಿಲ್ಲದ ಪೂಗೊಳಂ ಮನಂಗೊಳಿಸುಗುಮೇ ||

ಕಡುಗೂರ್ಪಿಲ್ಲದ ಕರವಾಳ್
ಕಡುಪಿಲ್ಲದ ಕುದುರೆ, ಗಾಡಿಯಿಲ್ಲದ ಬೆಲೆವೆಣ್ |
ನಡೆಯಿಲ್ಲದ ಕರ್ತ ಮನ
ಕ್ಕೊಡಂಬಡಂ ಮಾಟ್ಕುಮರ್ತಿಯಂ ಮಾಡುಗುಮೇ ?

ದೊಣೆಯಿಲ್ಲದ ಬಿಲ್ಲಾಳ್ ಬಿ
ನ್ನಣಮಿಲ್ಲದ ಕಿಱುಪು ಮಂತ್ರಿಯಿಲ್ಲದರಸು ಮಂ |
ತಣಮಿಲ್ಲದ ನೃಪನೋಲಗ
ಮೆಣೆಯಿಲ್ಲದ ಜಕ್ಕವಕ್ಕಿ ಸೊಗಯಿಸಿದಪುದೇ ||

ಮಲ್ಲಿಲ್ಲದ ಬಲಮಂ ಮೂ
ಗಿಲ್ಲದ ಮೊಗಮಾನೆಯಿಲ್ಲದರಮನೆ ಸಂಪ
ತ್ತಿಲ್ಲದ ಮಾನಸವಾಳ್ ದಯೆ
ಯಿಲ್ಲದ ಧರ್ಮಂ ಮನಂಗೊಳಲ್ ನೆಱೆದಪುದೇ ||

(ಅಲ್ಲಿಯೇ, vi. ೯೨–೯೮)

ಇವು ಕಂದದ ಅಂದವಾದರೆ ಅದರ ಹಿಂದಿನ ಛಂದದ ಚಂದವನ್ನು ನೋಡಿ :

ದಿನಕರನಿಲ್ಲದಂಬರಮಮಾವ್ರಮಹೀರುಹಮಿಲ್ಲದೊಂದು ಕಾ
ನನಮುಮರಲ್ದ ಪಂಕರುಹಮಿಲ್ಲದ ಪೂಗೊಳನುಂ ವನೇಭಮಂ |
ಡನನೆನೆ ಸಂದ ಯೂಥಪತಿಯಿಲ್ಲದರಣ್ಯಮುಮೇಂ ತ್ರಿಲೋಕಮಂ
ಡನನೆನೆ ಪೆಂಪುವೆತ್ತ ಜಿತನಿಲ್ಲದಯೋಧ್ಯೆಯುಮೊಪ್ಪಲಾರ್ಕುಮೇ ?

ರಸದ ತೀವ್ರತೆಗೆ ಅನುಗುಣವಾಗಿ ಇಲ್ಲಿ ವಿನೋಕ್ತಿಮಾಲೆಯೇ ಮೇಲ್ವಾಯ್ದು ಬಂದಂತೆ ಮಾಲೆಮಾಲೆಯಾಗಿ ಅಲಂಕಾರಗಳು ಎಲ್ಲ ಉತ್ತಮ ಕಾವ್ಯಗಳಲ್ಲೂ ಕಂಗೊಳಿಸುತ್ತವೆ. ಇದನ್ನು ನಾವು ಮನನಮಾಡಿ ಅಲಂಕಾರದ ಸೊಬಗನ್ನು ಸವಿಯುವ ಅರ್ಹತೆ ಪಡೆಯಬೇಕು.

ಇದೇ ಬಗೆಯ ಕರುಣರಸ ಪ್ರಸಂಗದಲ್ಲಿ ಪಂಪನು ರೂಪಕಮಾಲೆಯನ್ನು ನೇಯುವುದನ್ನುನೋಡಿ :

ಮದನನ ಕೈದುವೆಲ್ಲಿದನನಂಗನ ಕೈಪಿಡಿಯೆಲ್ಲಿದಂ ವಿಲಾ
ಸದ ಕಣಿಯೆಲ್ಲಿದಂ ಚದುರನೆಲ್ಲಿದನೆಲ್ಲಿದಂ ವಿನೋ
ದದ ಮೊದಲೆಲ್ಲಿದಂ ಸೊಬಗಿನಾಗರಮೆಲ್ಲಿದನಿಚ್ಚೆಯಾಣ್ಮನೆ
ಲ್ಲಿದನೆರ್ದೆಗಾಣ್ಮನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ ||

(ಆದಿಪುರಾಣ, III. ೧೫)

ಕಣ್ತಪ್ಪಿಸುವಂತಿರುವುದೇ ಯಶಸ್ವಿಯಾದ ಅಲಂಕಾರದ ಮರ್ಮ.

ಈಗ ಅನುರಕ್ತನೊಬ್ಬನು ಮೆಚ್ಚಿನ ಸುಂದರಿಯನ್ನು ಬಣ್ಣಿಸುವಾಗ ಸಾಲ್ಗೊಂಡು ಬರುವ ಸಂದೇಹಾಲಂಕಾರದ ಪರಿಯನ್ನು ನೋಡಿ: ಇಲ್ಲಿ ಆ ಅಲಂಕಾರ ಶೃಂಗಾರರಸಕ್ಕೆ ಪೋಷಕವಾಗಿದೆ—

ಇವಳಂ ಶೃಂಗಾರಸಾರಂ ಕುಸುಮಶರನೆ ಮೇಣ್ ಮಾಡಿದಂ ಪ್ರೋಲ್ಲಸತ್ಪ
ಲ್ಲವಪುಷ್ಪಂ ಮೇಣ್ ಬಸಂತಂ ಬಯಸಿ ಪಡೆದನೆತ್ತಂ ಸುಧಾಸಾರಮಂ ಸೂ
ಸುವ ಚಂದ್ರಂ ತಾನೆ ಮೇಣ್ ಪುಟ್ಟಿಸಿದನತಿಜಡಂ ಛಾಂದಸಂ ಪದ್ಮಜಂ ನಿ
ಕ್ಕುವಮಲ್ಲಂ ಕರ್ತೃವಾದಂದಿನಿತತಿಶಯಮಂ ತಾಳ್ವುದೇ ಕನ್ನೆಯಂದಂ ||

(ಕಾವ್ಯಾವಲೋಕನ, I. ೪೨)

ಇದು ಉರ್ವಶಿಯ ಲಾವಣ್ಯವರ್ಣನಪ್ರಸಂಗದಲ್ಲಿ ಕಾಳಿದಾಸನ ಪದ್ಯದ ಸುಂದರ ಅನುವಾದವಾಗಿದೆ :

ಅಸ್ಯಾಃ ಸರ್ಗವಿಧೌ ಪ್ರಜಾಪತಿರಭೂತ್ ಚಂದ್ರೋ ನು ಕಾಂತಿಪ್ರದಃ
ಶೃಂಗಾರೈಕರಸಃ ಸ್ವಯಂ ನು ಮದನೋ ಮಾಸೋ ನು ಪುಷ್ಪಾಕರಃ |
ವೇದಾಭ್ಯಾಸಜಡಃ ಕಥಂ ನು ವಿಷಯವ್ಯಾವೃತ್ತಕೌತೂಹಲೋ
ನಿರ್ಮಾತುಂ ಪ್ರಭವೇನ್ಮನೋಹರಮಿದಂ ರೂಪಂ ಪುರಾಣೋ ಮುನಿಃ ||

"ತಪಸ್ಸಿನ ಆಯಾಸದಿಂದ ಕೃಶದೇಹನಾದ, ಜಡಮತಿಯಾದ ನಾರಾಯಣ ಋಷಿ ಇಂತಹ ಮಾದಕ ಸುಂದರಿಯನ್ನು ಸೃಷ್ಟಿಸಿರುವುದು ಅಸಂಭವ. ಕಾಂತಿ ಪೂರ್ಣನಾದ ಚಂದ್ರನೋ ಶೃಂಗಾರಿಯಾದ ಮನ್ಮಥನೋ ಪುಷ್ಪರಸಿಕನಾದ ವಸಂತನೋ ನಿರ್ಮಿಸಿರಬೇಕು" ಎನ್ನುವಾಗ ಸಂಶಯದ ಛಾಯೆಯೊಂದಿಗೆ ಅಪಹ್ನುತಿ,

ವ್ಯತಿರೇಕಾಲಂಕಾರಗಳ ಛಾಯೆಯೂ ಸಂಕೀರ್ಣವಾಗಿ ಸೇರಿಕೊಂಡು ಅತಿಶಯ ಚಮತ್ಕಾರವನ್ನು ತರುತ್ತನೆ.

ರಸಾದಿ ಚಿತ್ತವೃತ್ತಿಗಳಷ್ಟೆ ಅಲ್ಲದೆ ಸಾಮಾನ್ಯ ವಕ್ರಾಭಿಪ್ರಾಯವನ್ನೂ ಜಾಣ್ಮೆಯಿಂದ ಸೂಚಿಸುವಾಗ ಬರುವ ವಸ್ತು-ಧ್ವನಿ ಕೂಡ ಉತ್ತಮ ಕಾವ್ಯವೆಂದು ಪರಿಗಣಿಸಿದ್ದು ಆನಂದವರ್ಧನನ ಕೊಡುಗೆಯಾಗಿದೆ. ಕನ್ನಡ ಜನಪದ ಕಾವ್ಯದಲ್ಲಿ ತುಂಬಿಕೊಂಡಿರುವ ಚತುರೋಕ್ತಿಗಳಲ್ಲಿ, ಬೆಡಗಿನ ವಚನಗಳಲ್ಲಿ, ಗಾದಿ-ಒಗಟಿಗಳಲ್ಲಿ—ಈ ವಸ್ತುಧ್ವನಿಯ ಛಾಯೆ ಆವರಿಸಿರುತ್ತದೆ. ಪ್ರಾಚೀನವಾದ ಒಂದೇ ಉದಾಹರಣೆ ಇಲ್ಲಿ ಸಾಕು—

ಎನಿತ್ತೆನಿತ್ತಂಬುಜಪತ್ರನೇತ್ರೆಯಾ
ಘನಸ್ತನಂಗಳ್ ಬಳೆಗುಂ ಕಿರಾತೆಯಾ |
ಅನಿತ್ತನತ್ತಂ ವನದೊಳ್ ವನೇಚರು
ತನತ್ತು ಬಿಲ್ಲಾನದನಂತೆ ಕೀಸುಗುಂ ||

(ಭಾಷಾಭೂಷಣ, ಸೂ.೬೮ರ ಉದಾಹರಣೆ)

ಪ್ರಾಕೃತದ ಗಾಥಾಸಪ್ತಶತಿಯಲ್ಲಿ ಚಿತ್ರಿತವಾಗಿರುವ ಹಳ್ಳಿಯ ಜಾಣ-ಜಾಣೆಯರ ಶೃಂಗಾರದ ಪರಿಗಳ ಪರಿಚಯವಿಲ್ಲದವರಿಗೆ, ಧ್ವನ್ಯಾಲೋಕದಲ್ಲಿ ಆನಂದವರ್ಧನ-ಅಭಿನವಗುಪ್ತರು ಆಯ್ದು ಕೆಲವು ಗಾಥೆಗಳಿಗೆ ಕೊಟ್ಟಿರುವ ವಿವರಣೆಗಳು ಗೊತ್ತಿಲ್ಲದವರಿಗೆ-ಈ ಪದ್ಯದಲ್ಲಿ ಅಂತಹ ಸೊಬಗೇನೂ ತೋರಲಾರದು. ಕಾಡಿನಲ್ಲಿ ಬೇಡನೊಬ್ಬನಿದ್ದಾನೆ. ಬೇಡಿತಿಯೂ ಒಬ್ಬಳಿದ್ದಾಳೆ. ಬೇಡಿತಿಯ ಎದೆಯುಬ್ಬಿದಂತೆಲ್ಲ ಬೇಡ ತನ್ನ ಬಿಲ್ಲನ್ನು ತೆಳ್ಳಗೆ ಹೆರೆಯುತ್ತಿದ್ದಾನಂತೆ. ಇಲ್ಲಿಯ ತಾತ್ಪರ್ಯವೇನು ? ಬೇಡಿತಿಯ ಲಾವಣ್ಯಾತಿಶಯದ ಪರಿಣಾಮವಾಗಿ ಬೇಡನ ಸಮಯವೆಲ್ಲ ಅವಳ ಸಂಗದಲ್ಲೇ ಮುಗಿಯುವುದರಿಂದ ಅವನಿಗೆ ಬೇಟೆಯ ವ್ಯಾಯಮವಿಲ್ಲದಂತಾಗಿದೆ ; ತ್ರಾಣ ಕುಗ್ಗಿದೆ. ಮೊದಲು ಹುಲಿ ಮುಂತಾದ ಮೃಗಗಳನ್ನು ಬೇಟೆಯಾಡಲೆಂದು ಮಾಡಿಕೊಂಡಿದ್ದ ಭಾರವಾದ ಬಿಲ್ಲನ್ನು ಅವನು ಈಗ ಹೊರಲಾರದಂತಾಗಿದ್ದಾನೆ. ಆದ್ದರಿಂದ ಬಿಲ್ಲಿನ ಭಾರವನ್ನು ಕಡಿಮೆಮಾಡಿಕೊಳ್ಳಲು ಅದನ್ನು ತೆಳ್ಳಗೆ ಮಾಡಿಕೊಳ್ಳುತ್ತಿದ್ದಾನೆ. ಇಲ್ಲಿ ಕವಿ ಯುಬೇಡಿತಿಯ ಸೌಂದರ್ಯಾತಿಶಯವನ್ನು ಈ ಧ್ವನಿಮಾರ್ಗದಿಂದ ಸೊಗಸಾಗಿ ಸೂಚಿಸಿದ್ದಾನೆ. ಇದೇ ' ವಸ್ತು-ಧ್ವನಿ 'ಯೆಂದರೆ.

ಇಂದು ಚಕ್ರಬಂಧ ಸ್ಪರ್ಧೆಗಳಿರುವಂತೆ ಹಿಂದೆ ಕವಿ-ರಸಿಕರು ಚಿತ್ರಕಾವ್ಯಬಂಧಗಳಲ್ಲಿಯೂ ಆಸಕ್ತಿ ತೋರುತ್ತಿದ್ದರು. ಆದರೆ ಕನ್ನಡಕಾವ್ಯಗಳಲ್ಲಿ ಅವುಗಳ ಹಾವಳಿ ಕಡಿಮೆ, ಏನೆಂದರೂ ಮಹಾಕವಿಗಳು ಕೂಡ ಒಮ್ಮೊಮ್ಮೆ ಶ್ಲೇಷ-ವಿರೋಧಾಭಾಸಗಳಿಂದ ಚಮತ್ಕಾರವನ್ನುಂಟುಮಾಡುವ ಪ್ರಲೋಭನಕ್ಕೆ ಒಳಗಾಗುವುದುಂಟು.ಆಗ ನಿಘಂಟಿನ ಸಹಾಯದಿಂದ ಶಬ್ದದ ನಾನಾರ್ಥಗಳ ಅನುಸಂಧಾನಮಾಡಿ

ಆಪಾತತಃ ತೋರುವ ವಿರೋಧವನ್ನು ಪರಿಹಾರ ಮಾಡಿಕೊಳ್ಳಬೇಕಾಗುತ್ತದೆ. ಇದು ನಿಜವಾಗಿ ಟೀಕೆ ಬರೆಯುವವರ ಕೆಲಸ. ಒಳ್ಳೆಯ ಕಾವ್ಯ ಟೀಕಾಸಾಪೇಕ್ಷವಾಗಿರಬೇಕೆ, ಇಲ್ಲವೆ–ಎಂಬ ಪ್ರಶ್ನೆಗೆ ಒಂದೇ ಉತ್ತರವಿಲ್ಲ. ಹೆಮ್ಮೆಯಿಂದ ಹೆಚ್ಚು ವ್ಯಾಖ್ಯಾಗಮ್ಯವಿದ್ದಷ್ಟೂ ಕಾವ್ಯ ಉತ್ತಮವರ್ಗದ್ದೆನ್ನುವವರೂ ಇದ್ದಾರೆ ಭಟ್ಟಿಯಂತೆ—

"ವ್ಯಾಖ್ಯಾಗಮ್ಯಮಿದಂ ಕಾವ್ಯಮುತ್ಸವಃ ಸುಧಿಯಾಮಲಮ್ |"

ನನ್ನ ವಿದ್ವತ್ಪ್ರಿಯತೆಯಿಂದ ಅವಿದ್ವಾಂಸರನ್ನು ಮಟ್ಟಹಾಕಿದ್ದೇನೆಂದು ಅವನಿಗೆ ಹೆಮ್ಮೆ. ಆದರೆ ಅದನ್ನೇ ದೊಡ್ಡ ಕಾವ್ಯದೋಷವೆಂದು ಲಾಕ್ಷಣಿಕನಾದ ಭಾಮಹ ಹೇಳಲು ಮರೆತಿಲ್ಲ. ಕನ್ನಡ ಕವಿಗಳೂ ಹೆಚ್ಚಾಗಿ ಭಾಮಹನನ್ನೇ ಅನುಸರಿಸಿದ್ದಾರೆ—

ಕಾಟ್ಪುರಮಾಗೆ ಕಾವ್ಯರಸಮರ್ಥಮುಮಕ್ಕರಮುಂ ಪ್ರತೀತಿಯಂ
ಮಾಟ್ಪಿನೆಗಂ ಜಲಕ್ಕನಿರೆ ಪೇೞದೆ ಕೆಮ್ಮನೊಂದೊಱಂಟುವೇೞ್ದು ಚಿಃ
ನೋೞ್ಪುದೆ ಮುಯ್ವನಾ ಕೃತಿಗೆ ಪಂಜಿಕೆವೇೞ್ಪುದದರ್ಕೆ ಟಿಪ್ಪಣಂ
ಬೇೞ್ಪುದು ಟೀಕು ವೇೞ್ಪುದೆನೆ ಪೇೞ್ದವನುಂ ಕವಿಯೆಂಬ ಲೆಕ್ಕಮೇ?

(ಕಾವ್ಯಾವಲೋಕನ, ೪೯)

ಪದ್ಯಕ್ಕೆ ಟೀಕೆ, ಆ ಟೀಕೆಗೆ ಟಿಪ್ಪಣಿ, ಆ ಟಿಪ್ಪಣಿಗೆ ವಿವರಣೆ—ಬೇಕೆನ್ನುವುದಾದರೆ ಅದೆಂತಹ ಕಾವ್ಯವೆಂದು ನಿರ್ದಾಕ್ಷಿಣ್ಯವಾಗಿ ಕೇಳಿಯೂ ಇದ್ದಾರೆ. ಏನೇ ಇರಲಿ, ರುದ್ರಭಟ್ಟನಲ್ಲಿ ಮಾತ್ರವಲ್ಲ; ಕುಮಾರವ್ಯಾಸನಂತಹವನಲ್ಲೂ ಶ್ಲಿಷ್ಟವಿರೋಧಾಭಾಸದ ಲಕ್ಷ್ಯಗಳು ಬಂದಾಗ ನಮ್ಮ ಬುದ್ಧಿಯ ಪರೀಕ್ಷೆ ಅಥವಾ ವ್ಯುತ್ಪತ್ತಿಗೆ ಸವಾಲು ತಪ್ಪುವುದಿಲ್ಲ. ಇದು ನೀಗಲು ಕನ್ನಡ ಸಾಹಿತ್ಯ ಪರಿಷತ್ತಿನವರು ಅಗಾಧ ಪರಿಶ್ರಮದಿಂದ ಸಿದ್ಧಪಡಿಸಿರುವ ಕನ್ನಡ ನಿಘಂಟಿಗೆ ಶರಣು ಹೋಗಲೇಬೇಕಾಗುತ್ತದೆ. ಒಂದು ಉದಾಹರಣೆ:

ಜನಪ ಕೇಳುಪಲಾಲಿತಾಂಜನ
ವೆನೆ ಜಿತಾಕ್ಷ ವಿಪಕ್ಷವಾದವು
ವಿನುತ ಕರ್ಣಪ್ರಣಯಿಗಳು ವೃಷಸೇನ ವೈರದಲಿ |
ಜನವಿಡಂಬನ ತಾರಕಾಮಂ
ಡನ ಕದರ್ಥಿತ ಕುಮುದಮೆನೆ ಲೋ
ಚನಯುಗಲವೊಪ್ಪಿದವು ಪಾಂಚಾಲನಂದನೆಯ ||

ಪ್ರಸಂಗ ದ್ರೌಪದೀಸ್ವಯಂವರದ್ದು. ವಧುವಾದ ದ್ರೌಪದಿ ಪೂಮಾಲೆ ಹಿಡಿದು ಸ್ವಯಂವರಮಂಟಪವನ್ನು ಪ್ರವೇಶಿಸುತ್ತಿದ್ದಾಳೆ. ಅವಳ ಕಣ್ಗಳ ಅಂದವನ್ನು ಕವಿ ಬಣ್ಣಿಸುತ್ತಿದ್ದಾನೆ. ಪ್ರಸ್ತುತವಾದ ಒಂದು ಅರ್ಥ ದ್ರೌಪದಿಯ ಕಣ್ಣುಗಳಿಗೂ ಅನ್ವಯಿಸಬೇಕು; ಅದಕ್ಕೆ ಆಪಾತತಃ ವಿರುದ್ಧವೆನಿಸುವ ಇನ್ನೊಂದರ್ಥ ಶ್ಲೇಷೆಯಿಂದ

ಅಪ್ರಸ್ತುತಕ್ಕೂ ಅನ್ವಯಿಸಬೇಕು. ದೂರಾನ್ವಯದಿಂದಾದರೂ ಈ ಪ್ರಸ್ತುತಾಪ್ರಸ್ತುತಗಳಿಗೆ ಸಂಬಂಧ ಕಲ್ಪಿತವಾಗಬೇಕು. ಲೋಚನಯುಗಲ 'ಉಪಲಾಲಿತಾಂಜನ' ಎಂದರೆ ಕಾಡಿಗೆಯಿಂದ ಲಿಪ್ತ. ಅವು 'ಜಿತಾಕ್ಷ-ವಿಪಕ್ಷ'ವಾಗುವುದೆಂದರೆ ನೋಡುವವರ 'ಅಕ್ಷ' ಅಥವಾ ನೇತ್ರಾದಿ ಇಂದ್ರಿಯಗಳನ್ನು ಗೆದ್ದು ಎವೆಯಿಕ್ಕದಂತಾಗಿಸಿದವು ಎಂದಿರಬಹುದೇನೋ! ಇದು ಕಣ್ಣಿನ ಪರವಾದ ಅರ್ಥವಾಯಿತು. ಈಗ ಅಪ್ರಸ್ತುತ ಅರ್ಥ ಯಾವದು ನೋಡೋಣ: ಯಾವನು ತಾಯಿಯಾದ ಅಂಜನಾದೇವಿಯಿಂದ ಉಪಲಾಲಿತನಾಗಿರುವನೋ ಆ ಕಪಿವೀರನೇ ಆಂಜನೇಯ. ಅವನು ರಾವಣನ ಮಗ ಅಕ್ಷಕುಮಾರನನ್ನು ಗೆದ್ದುದರಿಂದ ಜಿತಾಕ್ಷನೂ ಅಹುದು. ಆದರೆ ಅವನಿಗೆ ಈ ಕಣ್ಣು ವಿಪಕ್ಷ ಅಥವಾ ಶತ್ರುಪಕ್ಷವಾಯಿತೆನ್ನುವುದೇ ವಿರೋಧಾಭಾಸ. 'ರೆಪ್ಪೆಮುಚ್ಚದಂತೆ' ಎಂದರ್ಥ ಮಾಡಿದಾಗ ವಿರೋಧದ ಪರಿಹಾರ. ಹಾಗೆಯೇ 'ವಿನುತ ಕರ್ಣಪ್ರಣಯಿಗಳು' ಎಂದರೆ ಕಣ್ಣು ಕರ್ಣಾಂತ ವಿಶ್ರಾಂತವಾಗಿದೆ ಅಥವಾ ಕಿವಿವರೆಗೆ ನೀಳ್ದು ಸುಂದರವಾಗಿದೆ ಎಂಬುದು ಒಂದರ್ಥ. ಕೌರವಪಕ್ಷದಲ್ಲಿದ್ದ ಕರ್ಣನಲ್ಲಿ ಅನುರಕ್ತವಾಗಿಯೆಂಬುದು ಇನ್ನೊಂದರ್ಥ. ಹಾಗಿದ್ದರೆ ಆ ಕರ್ಣನ ಮಗ ವೃಷಸೇನನಲ್ಲಿ ವೈರವೆಂತು ಸಂಗತವೆನ್ನುವಾಗ ವಿರೋಧಾಭಾಸ. 'ವೃಷ' ಎಂದರೆ ಇಂದ್ರನೆಂದು ಇನ್ನೊಂದರ್ಥ; ಬಸವ ಎಂದೂ ಅರ್ಥವುಂಟು. ಇಂದ್ರನು ಕರ್ಣವೈರಿಯೆಂಬ ಅಭಿಪ್ರಾಯವಿರಬಹುದೇನೋ? ಆದರೆ ಇದಮಿತ್ಥಮೆಂದು ನಿರ್ಣಯಿಸುವುದು ಕಠಿಣ.

'ಜನವಿಡಂಬನ' ಎಂದರೆ ಜನರೆಲ್ಲ 'ಅಬ್ಬಾ' ಎಂದು ವಿಸ್ಮಯಪಡುವ ಹಾಗೆ' ಎಂದು ತಾತ್ಪರ್ಯ. ಕಣ್ಣಿನ ಪರವಾಗಿ 'ತಾರಕಾ' ಎಂದರೆ ಕಣ್ಣುಗುಡ್ಡೆ. ಅದು 'ಕದರ್ಥಿತ ಕಮುದ' ಎಂದರೆ ಕನ್ನೈದಿಲೆಯ ಸೊಬಗನ್ನು ಮೀರಿಸಿದೆ. ತಾರಕಾ ಮಂಡನ ಎಂದರೆ ನಕ್ಷತ್ರೇಶನಾದ ಚಂದ್ರನೂ ಅಹುದು. ಚಂದ್ರನು ಕನ್ನೈದಿಲೆಯನ್ನು ನೀಳ್ಕರಿಸುವುದೆಂಬುದು ವಿರೋಧಾಭಾಸ. ಕಣ್ಣಿನ ಅರ್ಥ ಸ್ವೀಕಾರದಿಂದ ವಿರೋಧಕ್ಕೆ ಪರಿಹಾರ.[3]

---

3 ಇಂಥದೇ ಇನ್ನೊಂದು ಪದ್ಯ ಚಿಕುಪಾಧ್ಯಾಯನ ವಿಷ್ಣುಪುರಾಣದ್ದು :

ಹರಿ ತನ್ನಳಿಯಂ ತಾನಾ
ಹರಿಯಳಿಯಂ ಹರಿಯೆ ತನ್ನೊಳಿರ್ಪಂ ತಾನೂ ।
ಹರಿಯೊಳಗಿರ್ಪನೆನಲ್ ಸಾ
ಗರದಾಧಿಕ್ಯಮನದಾನಪನಭಿವರ್ಣಿಸುವಂ ॥

ಸಮುದ್ರರಾಜನಿಗೆ ಶ್ರೀ ಹರಿ ಅಳಿಯ—ಅಮೃತವನ್ನು ಕಡೆವಾಗ ಸಾಗರದಲ್ಲಿ ಹುಟ್ಟಿದ ಲಕ್ಷ್ಮಿಯನ್ನು ಅವನು ಪರಿಗ್ರಹಿಸಿದ್ದರಿಂದ; ಇತ್ತ ಹರಿಗೆ ಸಮುದ್ರನೂ ಅಳಿಯ—ತ್ರಿವಿಕ್ರಮನ ಪಾದೋದ್ಭವೆಯಾದ ಗಂಗೆ ಸಮುದ್ರನನ್ನು ಸಂಗವಿಸಿದ್ದರಿಂದ; ಹಾಗೆಯೇ ಹರಿ ಸಾಗರಶಯನ; ಬ್ರಹ್ಮಾಂಡವನ್ನೆಲ್ಲ ಗರ್ಭೀಕರಿಸುವ ಹರಿಯಲ್ಲಿ ಸಮುದ್ರನೂ ಅಂತರ್ಗತನಾಗಿದ್ದಾನೆ.

ಹೀಗೆ ಸಂಸ್ಕೃತ–ಕನ್ನಡ ಲಕ್ಷಣಕಾರರ ಮಾರ್ಗದರ್ಶನದಲ್ಲಿ ನಮಗೆ ಹಿಂದಿನ ಶ್ರೇಷ್ಠಕಾವ್ಯಗಳ ತಲಸ್ಪರ್ಶಿಯಾದ ಅಧ್ಯಯನ ಸಾಧ್ಯವಾಗುತ್ತದೆ. ಕವಿಹೃದಯದ ಸೂಕ್ಷ್ಮ ಪರಿಚಯ ಶಕ್ಯವಾಗುತ್ತದೆ. ಕನ್ನಡ ಭಾಷೆಯ ವಿವಿಧ ಶೋಭಾಂಶಗಳೆಲ್ಲ ಹೃದ್ಗತವಾಗುತ್ತವೆ. ಆದ್ದರಿಂದಲೇ ಒಬ್ಬ ಕನ್ನಡ ಪ್ರಾಚೀನಕವಿ ಅಲಂಕಾರಶಾಸ್ತ್ರವನ್ನು ಶರದೃತುವಿನ ಆಗಮನಕ್ಕೆ ಹೋಲಿಸಿ ಬಣ್ಣಿಸಿದ್ದಾನೆ. ದಿಗ್ದಿಗಂತವೆಲ್ಲ ಪ್ರಸನ್ನವಾಗುತ್ತದೆ; ನಿರ್ಮಲ ನದೀಪ್ರವಾಹಗಳು ಕಂಠಹಾರದಂತೆ ಕಂಗೊಳಿಸುತ್ತವೆ; ನೆಲವೆಲ್ಲ ಮೃದು ಪದನ್ಯಾಸಕ್ಕೆ ತಕ್ಕುದಾಗುತ್ತದೆ—

ವಿಳಸಿತಮಪ್ಪಲಂಕರಣಶಾಸ್ತ್ರದವೊಲ್ ದೆಸೆಗಳ್ ಪ್ರಸನ್ನಮಂ
ತಳೆದು ಪೊದಟ್ದುವಾ ರುಚಕಭೂಷೆಯವೋಲ್ ನೆಲೆಗೊಂಡು ಕಂಠದೊಳ್
ತೊಳೆವ ಪಯಃಪ್ರವಾಹಮಯಮಾಯ್ತು ನದೀತತಿ ಸತ್ಕವೀಂದ್ರನು
ಜ್ಜ್ವಳ–ಕವಿತಾಳಿವೋಲ್ ಮೃದುಪದನ್ಯಸನೋಚಿತಮಾಯ್ತಿಳಾತಳಂ ॥

(ಪದ್ಯಸಾರ, ಭಾಗ II. ಪು.೪೧)

ಅದರ ಪರಿಣಾಮ ಕವಿವಿಮರ್ಶಕರಿಗೆ ಕೃತಕೃತ್ಯತೆ-

ಉತ್ಸವಕರಮೆನೆ ಬೆಳಪ ಶ
ರತ್ಸಮಯದೊಳಿಂದುಕಾಂತಿ ದಳವೇರುವವೋಲ್ ।
ವತ್ಸಳರೆನಿಸುವ ಬುಧರಿನ
ಮತ್ಸರರಿಂ ಕೃತಿ ಕೃತಾರ್ಥಮಕ್ಕುಮಮೋಘಂ ॥ [4]

---

4 ಹೋಲಿಸಿ :

ಮೃದುಮಧುರವಚನರಚನೆಯೊಳುದಾತ್ತಮರ್ಥಪ್ರತೀತಿಯಂ ಕೇಳ್ವ ಜನ ।
ಕ್ಕೆದಿರೊಳ್ಕುಡದಂದದು ಕಬ್ಬದೊಳಿರ್ದುಂ ಕವಿಯು ನಂನದೋರ್ದಂತೆ ವಲಂ ॥

# ಎಂ. ಶಾಮರಾವ್ : ಜೀವನ ಪರಿಚಯ

---

ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ

೧. ವಿದ್ಯಾಭ್ಯಾಸ ಮತ್ತು ವೃತ್ತಿ : ಎಂ. ಶಾಮರಾಯರು ೧೮೬೦ನೆಯ ಇಸವಿ ಆಗಸ್ಟ್ ೧೫ರಂದು ಜನಿಸಿದರು. ಜನ್ಮಸ್ಥಳ ಬಹುಶಃ ಮೈಸೂರು ಜಿಲ್ಲೆಯ ಗುಂಡ್ಲುಪೇಟೆ. ಇವರ ಪೂರ್ವಿಕರು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಮಹಿಷಿ ಗ್ರಾಮದವರು. ತಂದೆ ನಾರಾಯಣರಾಯರು ಗುಂಡ್ಲುಪೇಟೆಯ ತಾಲ್ಲೂಕ್ ಕಛೇರಿಯಲ್ಲಿ ಶೇಕದಾರರಾಗಿದ್ದರು. ಶಾಮರಾಯರ ಬಾಲ್ಯ ವಿದ್ಯಾಭ್ಯಾಸ ೧೮೬೯ರಲ್ಲಿ ಆ ಊರಿನ ಒಂದು ಇಂಗ್ಲಿಷ್ ಶಾಲೆಯಲ್ಲಿ ಮೊದಲಾಯಿತು. ೧೮೭೫ರಲ್ಲಿ ಅವರು ಮೈಸೂರಿನ ರಾಜಾ ಸ್ಕೂಲ್ ಸೇರಿದರು. ತಮ್ಮ ೧೬ನೆಯ ವಯಸ್ಸಿಗೆ ಮದುವೆಯಾದರು (೧೮೭೬). ಮರುವರ್ಷವೇ ಪಿತೃವಿಯೋಗ ದುಃಖ ಘಟಿಸಿತು (೧೮೭೭). ಈಗ ಅವರಿಗೆ ವಿದ್ಯಾಭ್ಯಾಸ ಜೀವನ ನಿರ್ವಹಣೆಗಳಿಗೆ ತುಂಬ ಕಷ್ಟವಾಯಿತು. ದ್ವಿತೀಯ ಎಫ್. ಎ. ತರಗತಿಯಲ್ಲಿದ್ದಾಗ ನಾಲ್ಕು ರೂಪಾಯಿ ವಿದ್ಯಾರ್ಥಿವೇತನದಲ್ಲಿ ಹೇಗೋ ಎಲ್ಲವನ್ನೂ ಸರಿದೂಗಿಸುತ್ತಿದ್ದರು. ೧೮೭೭ರಲ್ಲಿ ಎಫ್. ಎ. ಯನ್ನು ಪ್ರಥಮ ಸ್ಥಾನದೊಂದಿಗೆ ಮುಗಿಸಿದಾಗ, ಅವರಿಗೆ ಏಳೂವರೆ ರೂಪಾಯಿಗಳ ಅರಮನೆ ವಿದ್ಯಾರ್ಥಿವೇತನ ದೊರೆಯಿತು. ಮೈಸೂರಿನ ವಕೀಲರೊಬ್ಬರ ಶಿಫಾರಸಿನ ಮೇಲೆ, ಮುಂದೆ ದಿವಾನರಾಗಿ ಖ್ಯಾತರಾದ ಸರ್ ಪಿ. ಎನ್. ಕೃಷ್ಣಮೂರ್ತಿಗಳೂ ಹಣಸಹಾಯ ಮಾಡಲು ಒಪ್ಪಿದರು. ಈಗ ಶಾಮರಾಯರ ವ್ಯಾಸಂಗ ಬೆಂಗಳೂರಿಸಲ್ಲಿ ಸಾಗಿತು. ಗಣಿತವನ್ನು ವಿಶೇಷ ವಿಷಯವಾಗಿ ಆರಿಸಿಕೊಂಡು ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ೧೮೮೦ರಲ್ಲಿ ಅವರು ಬಿ. ಎ. ಪದವಿ ಪಡೆದರು. ಆ ವರ್ಷ ಕೊಳ್ಳೇಗಾಲದಲ್ಲಿ ಸಬ್‌ರಿಜಿಸ್ಟ್ರಾರ್ ಕೆಲಸಕ್ಕೆ ಸೇರಿದರು. ಅಲ್ಲಿ ಇರುತ್ತಿದ್ದಾಗಲೇ ಅವರಿಗೆ ಪತ್ನೀವಿಯೋಗವಾಯಿತು. ಮತ್ತೆ

ಮದುವೆಯಾದರು. ತಮ್ಮ ಕೆಲಸದ ನಡುವೆಯೇ ವ್ಯಾಸಂಗ ಮಾಡಿ, ಜನವರಿ ೧೮೮೫ರಲ್ಲಿ ಮಾನಸಿಕ ತತ್ತ್ವಶಾಸ್ತ್ರ (Mental Philosophy) ಮತ್ತು ಸಮಾಜಶಾಸ್ತ್ರ ವಿಷಯಗಳಲ್ಲಿ ಎಂ. ಎ. ಪದವಿ ಗಳಿಸಿದರು. ರಾಜನೈತಿಕ ಅರ್ಥ ವ್ಯವಸ್ಥೆಗೆಂದು ಗೊತ್ತಾಗಿದ್ದ ನಾರ್ಟನ್ ಬಹುಮಾನವನ್ನು ಪಡೆದರು.

ಶಾಮರಾಯರು ೧೮೮೫ರಲ್ಲಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ಸಹಾಯಾಧ್ಯಾಪಕರಾಗಿ ಸೇರಿದರು. ೧೮೮೮ರಲ್ಲಿ ಟ್ರಿಪ್ಲಿಕೇನ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾಗಿ ತೆರಳಿದರಾದರೂ ಮತ್ತೆ ಮೈಸೂರಿಗೇ ಹಿಂತಿರುಗಿದರು. ೧೮೯೦ರಲ್ಲಿ ಅವರ ಒಬ್ಬನೇ ಮಗ ಮೃತನಾಗಿ, ಅವರು ಅಪಾರ ದುಃಖವನ್ನು ಅನುಭವಿಸಿದರು. ಅನಂತರ ಅಧಿಕಾರದಲ್ಲಿದ್ದುಕೊಂಡೇ ಎಂ. ಸಿ. ಎಸ್. ಪರೀಕ್ಷೆಯನ್ನು ೧೮೯೨ರಲ್ಲಿ ತೆಗೆದುಕೊಂಡು ಅದರಲ್ಲಿ ಉತ್ತೀರ್ಣರಾದರು ಅದೇ ವರ್ಷ ಸೆಪ್ಟೆಂಬರ್ ೨೬ರಂದು ವಿದ್ಯಾ ಇಲಾಖೆಯ ಕಾರ್ಯದರ್ಶಿಯವರಿಗೆ ಸಹಾಯಕರಾಗಿ ನೇಮಕವಾದರು. ಸ್ವಲ್ಪ ತಡವಾಗಿ, ೧೮೯೫ರ ಡಿಸೆಂಬರ್‌ನಲ್ಲಿ ಅಸಿಸ್ಟೆಂಟ್ ಕಮೀಷನರ್ ಆಗಿ ಬಡ್ತಿ ಪಡೆದು, ಬೆಂಗಳೂರು, ಮೈಸೂರು ಮತ್ತು ಶಿವಮೊಗ್ಗೆಗಳಲ್ಲಿ ಕೆಲಸ ಮಾಡಿದರು. ಸರ್ಕಾರದ ಸಾಮಾನ್ಯ ಆಡಳಿತ, ಮುಜರಾಯಿ ಇಲಾಖೆ, ರೆವಿನ್ಯೂ ಇಲಾಖೆಗಳಲ್ಲಿ ಶಾಮರಾಯರ ಆಡಳಿತದ ಅನುಭವ ಹೆಚ್ಚುತ್ತ ಹೋಯಿತು. ಹೀಗೆ ಪಡೆದ ಅನುಭವದಿಂದ ಅವರು ಸರ್ಕಾರದ ಹಿರಿಯ ಅಧಿಕಾರಿಗಳಿಗೆ ಮೆಚ್ಚಾಗಿ, ೧೯೦೦-೦೩ರ ಅವಧಿಯಲ್ಲಿ, ತಮಗೆ ವಿದ್ಯಾರ್ಥಿ ದೆಸೆಯಲ್ಲಿ ನೆರವು ನೀಡಿದ ದಿವಾನ್ ಸರ್ ಪಿ. ಎನ್. ಕೃಷ್ಣಮೂರ್ತಿಗಳಿಗೆ ವಿಶ್ವಾಸಪಾತ್ರರಾಗಿ ಅವರಿಗೆ ಸಹಾಯಕ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿದರು. ೧೯೦೪ರಲ್ಲಿ ಮುಜರಾಯಿ ಇಲಾಖೆ ಕಾರ್ಯದರ್ಶಿಯಾಗಿ ಕೆಲಸ ಮಾಡಿದ ಮೇಲೆ, ೧೯೦೫ರಲ್ಲಿ ಸಾಮಾನ್ಯ ಮತ್ತು ರೆವಿನ್ಯೂ ಇಲಾಖೆಗಳ ಉಪಕಾರ್ಯದರ್ಶಿಗಳಾಗಿ ಬಡ್ತಿ ಪಡೆದರು. ಅದೇ ವರ್ಷ ಸೆಪ್ಟೆಂಬರ್‌ನಲ್ಲಿ ಸಹಕಾರ ಸಂಘಗಳ ರಿಜಿಸ್ಟ್ರಾರ್ ಆಗಿ ಸಂಸ್ಥಾನದಲ್ಲಿ ಸಹಕಾರ ಸಂಘಗಳ ಹುಟ್ಟು ಬೆಳವಣಿಗೆಗೆ ಮುಖ್ಯ ಕಾರಣ ಕರ್ತರಾದರು. ಅಲ್ಲಿಂದ ಆರು ವರ್ಷಗಳ ಕಾಲ ಆ ಜವಾಬ್ದಾರಿಯ ಜೊತೆಗೆ ಅರಣ್ಯ ಇಲಾಖೆಯ ಹಾಗೂ ಕೃಷಿ ಬ್ಯಾಂಕುಗಳ ವ್ಯವಹಾರಗಳನ್ನೂ ನೋಡಿಕೊಳ್ಳುತ್ತಿದ್ದರು. ೧೯೧೧ರಲ್ಲಿ ಡೆಪ್ಯುಟಿ ಕಮೀಷನರ್ ಆಗಿಯೂ ಜಿಲ್ಲಾ ನ್ಯಾಯಾಧೀಶರಾಗಿಯೂ ಕೆಲಸ ಮಾಡಿದರು. ಜೂನ್ ೧೯೧೨ರಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರ ಸಲಹೆ ಮೇರೆಗೆ ಮೈಸೂರು ಸಂಸ್ಥಾನದ ವಿದ್ಯಾಇಲಾಖೆಯ ಮುಖ್ಯಸ್ಥರಾಗಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಎಜುಕೇಷನ್ ಎಂಬ ಹುದ್ದೆಯನ್ನಲಂಕರಿಸಿದರು. ಈ ಹುದ್ದೆಯಲ್ಲಿ ಆರು ವರ್ಷಗಳ ಕಾಲ ಕೆಲಸ ಮಾಡಿ ೧೯೧೮ರಲ್ಲಿ ತಮ್ಮ ೫೮ನೆಯ ವಯಸ್ಸಿನಲ್ಲಿ ನಿವೃತ್ತರಾದರು.

೨. ಆಡಳಿತಾಧಿಕಾರಿಯಾಗಿ: ಎಂ. ಶಾಮರಾಯರ ಸೇವಾವಧಿ ಮತ್ತು ಸೇವಾ ಕ್ಷೇತ್ರ ಮೈಸೂರು ಸಂಸ್ಥಾನದ ಪ್ರಭುಗಳಾಗಿದ್ದ ಚಾಮರಾಜೇಂದ್ರ ಒಡೆಯರ್ X (೧೮೮೧-೯೪, ಮತ್ತು ಕೃಷ್ಣರಾಜ ಒಡೆಯರ್ IV (೧೮೯೫-೧೯೪೦) ಅವರ ಆಳಿಕೆಯ ಕಾಲ ಹಾಗೂ ಪ್ರದೇಶಗಳಿಗೆ ಒಳಪಟ್ಟಿದ್ದುವು. ಆಗ ಬ್ರಿಟಿಷರ ಮೇಲಾಳಿಕೆ. ಈ ದೊರೆಗಳ ಕಾಲದಲ್ಲಿ ಸಂಸ್ಥಾನ ನಾನಾ ಅಭ್ಯುದಯಕರ ಕಾರ್ಯಕ್ರಮಗಳಿಂದ ಅಭಿವೃದ್ಧಿ ಸ್ಥಿತಿಗೆ ಬಂದಿತು. ಶಾಮರಾಯರು ಅಂದಿನ ಸಿಬ್ಬಂದಿ ವರ್ಗದ ಹಿರಿಯ ಅಧಿಕಾರಿಗಳಲ್ಲಿ ಒಬ್ಬರಾಗಿದ್ದರು. ಸಬ್‌ರಿಜಿಸ್ಟ್ರಾರ್ ಹುದ್ದೆಯಿಂದ ಆರಂಭಿಸಿ ಡೆಪ್ಯುಟಿ ಕಮೀಷನರ್ ಹುದ್ದೆಯವರೆಗೆ, ಅಧ್ಯಾಪಕ ಪದವಿಯಿಂದ ವಿದ್ಯಾಧಿಕಾರಿ ಪದವಿಯವರೆಗೆ ಅವರು ನಿರ್ವಹಿಸಿದ ಜವಾಬ್ದಾರಿಗಳು ಹಲವಾರು. ಹಂತಹಂತವಾಗಿ ಹುದ್ದೆಯಲ್ಲಿ ಅವರು ಬಡ್ತಿ ಪಡೆಯುತ್ತ ಹೋದರು. ಅವರ ಸೇವಾವಧಿಯಲ್ಲಿ ಸರ್ ಕೆ. ಶೇಷಾದ್ರಿ ಅಯ್ಯರ್, ಪಿ. ಎನ್. ಕೃಷ್ಣಮೂರ್ತಿ, ವಿ. ಪಿ. ಮಾಧವರಾವ್, ಟಿ. ಆನಂದರಾವ್, ಎಂ. ವಿಶ್ವೇಶ್ವರಯ್ಯ ಇವರು ಮೈಸೂರು ಸಂಸ್ಥಾನದ ದಿವಾನರಾಗಿದ್ದರು.

ಶಾಮರಾಯರ ಸೇವಾಕಾರ್ಯಗಳನ್ನು ಗುರುತಿಸಿ ಅಂದಿನ ಬ್ರಿಟಿಷ್ ಸಾರ್ವಭೌಮ ಸರ್ಕಾರದವರು ಜನವರಿ ೧೯೧೪ರಲ್ಲಿ ಅವರಿಗೆ ರಾವ್‌ಬಹದ್ದೂರ್ ಪ್ರಶಸ್ತಿಯನ್ನೂ ಪ್ರಭುಗಳಾದ ನಾಲ್ವಡಿ ಕೃಷ್ಣರಾಜ ಒಡೆಯರು ನವೆಂಬರ್ ೧೯೧೭ರಲ್ಲಿ 'ರಾಜಕಾರ್ಯಪ್ರಸಕ್ತ' ಪ್ರಶಸ್ತಿಯನ್ನೂ ನೀಡಿದರು.

ರಾಜ್ಯಶಾಸ್ತ್ರ, ಇತಿಹಾಸ, ಮನಶ್ಶಾಸ್ತ್ರ ಮತ್ತು ಅರ್ಥಶಾಸ್ತ್ರಗಳ ವಿದ್ಯಾರ್ಥಿಯಾಗಿದ್ದ ಶಾಮರಾಯರಿಗೆ ದೇಶದ ಆಡಳಿತ ನಿರ್ವಹಣೆಯಲ್ಲಿ ಸಾಮರ್ಥ್ಯವೂ ಕೌಶಲವೂ ಇದ್ದುದು ಸಹಜವೇ ಆಗಿದೆ. ತಮ್ಮ ವೃತ್ತಿಜೀವನದ ಆರಂಭದಲ್ಲಿಯೇ ಅವರು ಎಂ. ಸಿ. ಎಸ್. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ಅದನ್ನು ರುಜುವಾತು ಪಡಿಸಿದ್ದರು. ೧೯೦೫ರಲ್ಲಿ ಅವರು ಸಹಕಾರ ಸಂಘಗಳ ರಿಜಿಸ್ಟ್ರಾರ್ ಆಗಿ ನಿಯಮಿತರಾದ ಕೂಡಲೇ ಭಾರತವನ್ನೆಲ್ಲ ಸಂಚರಿಸಿ ದೇಶದ ನಾನಾ ಭಾಗಗಳ ಸಹಕಾರ ಸಂಘಗಳ ನಡೆವಳಿಕೆಗಳನ್ನೆಲ್ಲ ಚೆನ್ನಾಗಿ ಅಭ್ಯಾಸ ಮಾಡಿಕೊಂಡು ಬಂದರು. ಹಾಗೆ ಬಂದ ಮೇಲೆ ಮೈಸೂರು ಸಂಸ್ಥಾನದಲ್ಲಿಯೂ ಸಾಧ್ಯವಿದ್ದ ಕಡೆಗಳಲ್ಲೆಲ್ಲ ಸಹಕಾರ ಸಂಘಗಳನ್ನು ಸ್ಥಾಪಿಸಿದರು. ೧೯೧೭ರ ವೇಳೆಗೆ ಇಂತಹ ಸಂಘಗಳು ಶಾಖೋಪಶಾಖೆಗಳಾಗಿ ಸಂಸ್ಥಾನವನ್ನೆಲ್ಲ ವ್ಯಾಪಿಸಿದ್ದುವು. ಡಿ. ವಿ. ಗುಂಡಪ್ಪನವರು ಅಕ್ಟೋಬರ್ ೧೯೨೫ರ 'ದಿ ಇಂಡಿಯನ್ ರಿವ್ಯೂ ಆಫ್ ರಿವ್ಯೂಸ್' ಪತ್ರಿಕೆಯಲ್ಲಿ, ಆ ವರ್ಷದ ಸೆಪ್ಟೆಂಬರ್ ತಿಂಗಳಲ್ಲಿ ಜರುಗಿದ ಸಹಕಾರ ಸಂಘಗಳ ವಾರ್ಷಿಕ ಸಮ್ಮೇಳನದ ಬಗೆಗೆ ವರದಿ ಮಾಡುತ್ತ ಶಾಮರಾಯರನ್ನು "ಮೈಸೂರು ಸಂಸ್ಥಾನದ ಸಹಕಾರ ಚಳವಳಿಯ ಜನಕರು" ಎಂಬುದಾಗಿ ಕೊಂಡಾಡಿದ್ದಾರೆ.

ಶಾಮರಾಯರು ದಿವಾನ್ ವಿಶ್ವೇಶ್ವರಯ್ಯನವರು ವ್ಯವಸ್ಥೆಗೊಳಿಸಿದ ಮೈಸೂರು ಸಂಸ್ಥಾನದ ಸಂಪದಭ್ಯುದಯ ಸಮಾಜದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಮುಖ್ಯವಾಗಿ ಆ ಸಮಾಜದ ವಿದ್ಯಾಭ್ಯಾಸ ಮಂಡಲಿಯ ವ್ಯವಹಾರಗಳಲ್ಲಿ ಅವರು ಪ್ರಮುಖ ಪಾತ್ರ ವಹಿಸಿದ್ದರು. ಅದರ ಚಟುವಟಿಕೆಯ ಭಾಗವಾಗಿಯೇ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪನೆಯಾದುದು. ಹಾಗೂ ಚರಿತ್ರೆಯ ಮಹಾಪುರುಷರ ಸಾಹಸ ಜೀವನವನ್ನು ಚಿತ್ರಿಸುವ 'ದಿ ಇಂಡಿಯನ್ ಹೀರೋಸ್' ಗ್ರಂಥ ಅವರಿಂದ ಸಂಪಾದಿತವಾಗಿ ಪ್ರಕಟವಾದುದು.

೩. ಅಧ್ಯಾಪಕರಾಗಿ, ವಿದ್ಯಾಧಿಕಾರಿಗಳಾಗಿ : ೧೮೮೫ರಲ್ಲಿ, ಮಹಾರಾಜ ಕಾಲೇಜಿನಲ್ಲಿ ಶಾಮರಾಯರು ಇಂಗ್ಲಿಷ್ ಮತ್ತು ತರ್ಕಶಾಸ್ತ್ರಗಳ ಸಹಾಯಾಧ್ಯಾಪಕರಾಗಿ ನೇಮಕವಾದ ಮೇಲೆ ನಡುವಿನ ಸ್ವಲ್ಪ ವಿಚ್ಛಿತ್ತಿಯ ಹೊರತಾಗಿ ೧೮೯೨ರ ವರೆಗೆ ಅವರು ಅಲ್ಲಿಯೇ ಕೆಲಸ ಮಾಡುತ್ತಿದ್ದರು. ಈ ೬-೭ ವರ್ಷಗಳ ಅನುಭವ ಅವರಿಗೆ ವಿದ್ಯಾಭ್ಯಾಸದ ಪೋಷಣೆ ಬೆಳವಣಿಗೆಗಳಲ್ಲಿ ತುಂಬ ಆಸಕ್ತಿ ಹುಟ್ಟಿಸಿದುವೆಂದು ತೋರುತ್ತದೆ. ಇದೇ ಅವಧಿಯಲ್ಲಿ ಅವರ ಕೃತಿ 'ಟೆನ್ ಇಯರ್ಸ್ ಆಫ್ ನೇಟಿವ್ ರೂಲ್ ಇನ್ ಮೈಸೂರ್' ಪ್ರಕಟವಾಯಿತು (೧೮೯೧). ಆಗ್ಗೆ ಮೈಸೂರಿನ ಮಹಾರಾಜ ಕಾಲೇಜು ದಕ್ಷಿಣ ಭಾರತದ ೨೭ ದ್ವಿತೀಯ ದರ್ಜೆ ಕಾಲೇಜುಗಳಲ್ಲಿ, ಅಗ್ರಸ್ಥಾನದ ಮಾನ್ಯತೆ ಪಡೆದಿತ್ತು. ಅವರು ೧೮೯೨ರಲ್ಲಿ, ಎಚ್. ಜೆ. ಭಾಭಾ ಅವರು ವಿದ್ಯಾ ಇಲಾಖೆ ಕಾರ್ಯದರ್ಶಿಗಳಾಗಿದ್ದಾಗ ಅವರ ಕೈಕೆಳಗೆ ಸಹಾಯಕರಾಗಿ ವರ್ಗವಾದರು. ಅಲ್ಲಿ ಆದೇತಾನೆ ವ್ಯವಸ್ಥೆಗೊಂಡ ಪಠ್ಯಪುಸ್ತಕ ಸಮಿತಿಯ ಹಿರಿಯ ಸದಸ್ಯರಲ್ಲಿ ಒಬ್ಬರಾಗಿ ಕೆಲಸ ಮಾಡಿದರು ; ಶ್ರಮವಹಿಸಿ ಕನ್ನಡ ಭಾಷೆಯ ಕ್ರಮಿಕ ಪುಸ್ತಕಗಳ ರೂಪರೇಖೆಗಳನ್ನು ಸಿದ್ಧಪಡಿಸಿದರು. ಇದೇ ಅವಧಿಯಲ್ಲಿ, ೧೮೯೩ರ ಜನವರಿ ತಿಂಗಳಲ್ಲಿ ಶಾಲಾ ವಿದ್ಯಾರ್ಥಿಗಳಿಗೂ ಅಧ್ಯಾಪಕರಿಗೂ ಸಹಾಯವಾಗುವ, ಅವರ ಚಟುವಟಿಕೆಗಳಿಗೆ ಮುಖವಾಣಿಯಾಗಲೆಂದು ಯೋಚಿಸಿದ 'ವಿದ್ಯಾದಾಯಿನಿ' ಎಂಬ ಕನ್ನಡ ಮಾಸಪತ್ರಿಕೆಯನ್ನು ಆರಂಭಿಸಿದರು. ೧೯೧೨ರಲ್ಲಿ ವಿದ್ಯಾಭ್ಯಾಸ ಇಲಾಖೆಯಲ್ಲಿ ಇನ್‌ಸ್ಪೆಕ್ಟರ್ ಜನರಲ್ ಆದಮೇಲಂತೂ ಕನ್ನಡ ನಾಡಿನಲ್ಲಿ ವಿವಿಧ ದರ್ಜೆಯ ಶಾಲೆಗಳೂ ಅಧ್ಯಾಪಕ ತರಬೇತಿ ಸಂಸ್ಥೆಗಳೂ ಹೆಚ್ಚಿದುವು. ವಿದ್ಯಾರ್ಥಿ ಅಧ್ಯಾಪಕರ ಸಂಖ್ಯೆ ಬೆಳೆಯಿತು. ಸ್ತ್ರೀ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ಅಧ್ಯಾಪಕರ ಜೀವನ ಮಟ್ಟದ ಸ್ಥಿತಿಗತಿಗಳು ಸುಧಾರಿಸಿದುವು. ಎಲ್ಲಕ್ಕಿಂತ ಮಿಗಿಲಾಗಿ ಕಡ್ಡಾಯ ಪ್ರಾಥಮಿಕ ಶಿಕ್ಷಣ ಜಾರಿಗೊಳಿಸಲ್ಪಟ್ಟಿತು. ಕನ್ನಡ ಮುದ್ರಣಾಕ್ಷರಗಳ ರೂಪರಚನೆಗಳನ್ನು ಉತ್ತಮಪಡಿಸಲು ಶಾಮರಾಯರು ನಡೆಸಿದ ಪ್ರಯತ್ನಗಳ ಫಲವೇ ಈಗ ಸರ್ಕಾರಿ ಮುದ್ರಣಾಲಯದಲ್ಲಿ ಬಳಕೆಯಲ್ಲಿರುವ ಕನ್ನಡ ಅಚ್ಚಿನ ಮೊಳೆಗಳು ಎಂಬುದಾಗಿ ಡಿ. ವಿ. ಜಿ. ಬರೆದಿದ್ದಾರೆ.

ಶಾಮರಾಯರು ತಮ್ಮ ಕಾಲದ ಪ್ರಖ್ಯಾತ ಶಿಕ್ಷಣ ತಜ್ಞರಾಗಿದ್ದರು. ಎಂ. ಸಿ. ಎಸ್. ಪರೀಕ್ಷೆಯ ಕಾರ್ಯನಿರ್ವಾಹಕ ಸಮಿತಿಯ ಕಾರ್ಯದರ್ಶಿಗಳಾಗಿಯೂ ಆಗಾಗ ಪಠ್ಯನಿಯಾಮಕ ಸಮಿತಿ ಸ್ಥಳೀಯ ಪರೀಕ್ಷಾ ಸಮಿತಿಗಳ ಅಧ್ಯಕ್ಷರಾಗಿಯೂ ಅವರು ಕಾರ್ಯ ನಿರ್ವಹಿಸಿದರು. ಮೈಸೂರಿನ ಕಿವುಡ ಮೂಕರ ಪಾಠಶಾಲೆಯ ಅಧ್ಯಕ್ಷರಾಗಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆಗೆ (೧೯೧೬) ಮೊದಲು, ಆ ಸಂಬಂಧದಲ್ಲಿ ನಿಯಮಿತವಾಗಿದ್ದ ಕಾರ್ಯ ನಿರ್ವಾಹಕ ಸಂಘಕ್ಕೆ ಅವರು ಸದಸ್ಯರಾಗಿದ್ದರು. ವಿಶ್ವವಿದ್ಯಾನಿಲಯ ಸ್ಥಾಪನೆಯಾದ ಮೇಲೆ ಅವರು ಮೈಸೂರು ವಿಶ್ವವಿದ್ಯಾನಿಲಯದ 'ಫೆಲೋ' ಎಂಬ ಮಾನ್ಯತೆ ಪಡೆದರು (೧೯೩೨). ಮುಂದೆ ಹಲವು ವರ್ಷ ಈ ವಿಶ್ವವಿದ್ಯಾನಿಲಯದ ಕೌನ್ಸಿಲ್ ಸದಸ್ಯರಾಗಿದ್ದರು. ಆಗಾಗ ಕೆಲವು ಉಪಯುಕ್ತ ವಿಷಯಗಳ ಮೇಲೆ ದಿ ಮೈಸೂರು ಯೂನಿವರ್ಸಿಟಿ ಮ್ಯಾಗಜೈನ್‌ನಲ್ಲಿ ಲೇಖನಗಳನ್ನು ಬರೆದು ಪ್ರಕಟಿಸಿದರು. ೧೯೪೯ರಲ್ಲಿ, ಮುಮ್ಮಡಿ ಕೃಷ್ಣರಾಜ ಒಡೆಯರ ಹೆಸರಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಒಂದು ದತ್ತಿಯನ್ನು ಸ್ಥಾಪಿಸಿದರು.

೪. ಸಾಮಾಜಿಕ ಕಾರ್ಯಕರ್ತರಾಗಿ : ಶಾಮರಾಯರು ತಮ್ಮ ನಿವೃತ್ತಿಯ (೧೯೧೮) ಅನಂತರ ಸುಮಾರು ೨೦ ವರ್ಷಗಳ ಕಾಲ ಅಂದಿನ ಲೆಜಿಸ್ಲೇಟಿವ್ ಕೌನ್ಸಿಲ್ ಸದಸ್ಯರಾಗಿದ್ದರು. ಬೆಂಗಳೂರಿನ ಸಾರ್ವಜನಿಕ ಪುಸ್ತಕ ಭಂಡಾರ ಪ್ರಾರಂಭವಾದಾಗ (೧೯೧೪) ಸಹಜವಾಗಿಯೇ ಅವರು ಅದರ ಅಧ್ಯಕ್ಷ ಪದವಿಯನ್ನು ಅಲಂಕರಿಸಿದರು. ಅಲ್ಲಿಂದ ಈಚಿನ ವರ್ಷಗಳಲ್ಲಿ ಗ್ರಂಥಾಲಯದ ಬೆಳವಣಿಗೆಗೆ ಅವರು ಬಹುವಾಗಿ ಶ್ರಮಿಸಿದರು.

ಅವರ ಸಾಮಾಜಿಕ ಜೀವನದಲ್ಲಿ ಮಹತ್ವದ ಒಂದು ಸಂಗತಿಯಾಗಿ ನೆನೆಯಬೇಕಾದ್ದು ಎಂದರೆ, ಅವರು ಬೆಂಗಳೂರಿನ ವಿಖ್ಯಾತ ಸಾಂಸ್ಕೃತಿಕ ಸಂಸ್ಥೆಯಾಗಿರುವ ಮಿಥಿಕ್ ಸೊಸೈಟಿಯ ಸ್ಥಾಯಿ ಸದಸ್ಯರಲ್ಲಿ ಒಬ್ಬರಾಗಿದ್ದರು. ತಾವು ನಿಧನರಾಗುವವರೆಗೆ ಈ ಸಂಸ್ಥೆಯ ಚಟುವಟಿಕೆಗಳಲ್ಲಿ ಅವರು ಸಕ್ರಿಯವಾಗಿ ಪಾಲುಗೊಂಡಿದ್ದರು. ಸಂಸ್ಥೆಯ ಸ್ಥಾಪಕರಾದ ರೆವೆರೆಂಡ್ ಫಾದರ್ ಎ. ಎಂ. ಟಬರ್ಡ್ ೧೯೩೫ರಲ್ಲಿ ಒಮ್ಮೆ ಫ್ರಾನ್ಸ್ ದೇಶಕ್ಕೆ ತೆರಳಿದಾಗ, ಇವರು ಆ ಅವಧಿಗೆ ಕಾರ್ಯನಿರ್ವಾಹಕ ಮಂಡಲಿ ಅಧ್ಯಕ್ಷರಾಗಿದ್ದರು. ಟಬರ್ಡ್ ನಿಧನರಾದ ಮೇಲೆ, ೧೯೩೬ರಿಂದ ತಾವೇ ಅಧ್ಯಕ್ಷರಾಗಿ ಪ್ರತಿವರ್ಷವೂ ಚುನಾಯಿತರಾಗುತ್ತಿದ್ದರು. ಸುಮಾರು ೧೩ ವರ್ಷಗಳ ಕಾಲ ಈ ಸ್ಥಾನದಲ್ಲಿದ್ದುಕೊಂಡು, ಸಂಸ್ಥೆಯ ಪುರೋಭಿವೃದ್ಧಿಗೆ ಕಾರಣಕರ್ತರಾದ ವ್ಯಕ್ತಿಗಳಲ್ಲಿ ಮುಖ್ಯರಾಗಿದ್ದರು. ಅವರು ಮಿಥಿಕ್ ಸೊಸೈಟಿಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಮೈಸೂರು ಸಂಸ್ಥಾನದ ರಾಜ್ಯಾಧಿಕಾರಿಗಳ ಹಾಗೂ ದೇಶದ ನಾನಾ ಭಾಗಗಳ ಗಣ್ಯ ವಿದ್ವಾಂಸರ, ದೇಶಪ್ರೇಮಿ ಮಹಾಜನರ ಸಂಬಂಧ ಸಂಪರ್ಕಗಳು ಇದಕ್ಕೆ ದೊರೆಯುವಂತೆ ಅವರು ಶ್ರಮವಹಿಸಿದರು.

ವಿದ್ವಾಂಸರುಗಳಿಂದ ಉಪನ್ಯಾಸಗಳ ಏರ್ಪಾಟು, ತ್ರೈಮಾಸಿಕ ಪತ್ರಿಕೆಯ ಪ್ರಕಟಣೆ, ಆಧಾರ ಗ್ರಂಥಗಳ ಭಂಡಾರದ ವ್ಯವಸ್ಥೆ ಇವು ಯಶಸ್ವಿಯಾಗಿ ಸಾಗಿದುವು. ತಮ್ಮ ಉದ್ಗ್ರಂಥವಾದ 'ಮಾಡರ್ನ್ ಮೈಸೂರ್' ಪ್ರಕಟಣೆಯಿಂದ (೧೯೩೬) ಬಂದ ಹಣ ಈ ಸಂಸ್ಥೆಗೆ ಸೇರುವಂತೆ ಶಾಮರಾಯರು ವ್ಯವಸ್ಥೆ ಮಾಡಿದರೆಂಬುದನ್ನು ಇಲ್ಲಿ ನೆನೆಯಬೇಕು. ಸಂಸ್ಥೆಯ ವಾರ್ಷಿಕಾಧಿವೇಶನಗಳಲ್ಲಿ ಅವರ ಗುಣಗಳನ್ನೂ ಕಾರ್ಯತತ್ಪರತೆಯನ್ನೂ ಮೆಚ್ಚಿ ಅನೇಕ ಪ್ರಸಿದ್ಧರು ಪ್ರಕಟಿಸಿರುವ ಅಭಿಪ್ರಾಯಗಳನ್ನು ಗಮನಿಸಿದರೆ, ಅವರ ಕಾರ್ಯವಿಧಾನ ದಕ್ಷತೆಗಳು ಏನೆಂಬುದು ನಮಗೆ ಮನವರಿಕೆಯಾಗುತ್ತವೆ. ಹಾಗೆ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದವರಲ್ಲಿ ದಿವಾನ್ ವಿ. ಪಿ. ಮಾಧವರಾವ್, ಪ್ರಿನ್ಸಿಪಾಲ್ ಎಫ್. ಆರ್. ಸೆಲ್, ದಿವಾನ್ ಮಿರ್ಜಾ ಇಸ್ಮಾಯಿಲ್, ಫಾದರ್ ಬ್ರೌನ್, ಎಸ್. ಐ. ರಾಜಗೋಪಾಲಾಚಾರಿ, ಸರ್ ಚಾರ್ಲ್ಸ್ ಟಾಡ್ ಹಂಟರ್ ಮೊದಲಾದವರಿದ್ದಾರೆ. ಸಂಸ್ಥೆಯ ತ್ರೈಮಾಸಿಕ ಪತ್ರಿಕೆ ತನ್ನ ೩೦ನೆಯ ಸಂಪುಟದ ಮೊದಲ ಸಂಚಿಕೆಯನ್ನು ಇವರ ಸ್ಮರಣಸಂಚಿಕೆಯಾಗಿ ಪ್ರಕಟಿಸಿ, ತನ್ನ ಗೌರವ ಸೂಚಿಸಿದೆ.

೫. ಸಾಹಿತ್ಯ ಸೇವೆಯಲ್ಲಿ: ಶಾಮರಾಯರು ಕನ್ನಡ ಭಾಷೆ ಸಾಹಿತ್ಯಗಳ ನವೋದಯದ ಅಗ್ರಗಣ್ಯ ಪುನರುಜ್ಜೀವಕರಲ್ಲಿ ಒಬ್ಬರು. ಅವರು 'ವಿದ್ಯಾದಾಯಿನಿ' ಎಂಬ ಶಾಲಾ ಮಾಸಪತ್ರಿಕೆಯನ್ನು ಹುಟ್ಟುಹಾಕಿದ ವಿಷಯವನ್ನು ಹಿಂದೆಯೇ ಹೇಳಿದೆ. ೧೮೯೫ರಲ್ಲಿ, ಅವರು ಸ್ಥಾಪಿಸಿದ 'ಕರ್ಣಾಟಕ ಗ್ರಂಥಮಾಲೆ' ಎಂಬ ಸಾಹಿತ್ಯ ಪತ್ರಿಕೆಯ ವಿಷಯವನ್ನು ಅತ್ಯವಶ್ಯವಾಗಿ ಇಲ್ಲಿ ಉಲ್ಲೇಖಿಸಬೇಕು. ಹಳೆಯ ಸಾಹಿತ್ಯ ಪರಿಚಯ, ಹೊಸ ಸಾಹಿತ್ಯ ನಿರ್ಮಾಣ ಇವನ್ನು ಪ್ರಮುಖೋದ್ದೇಶಗಳನ್ನಾಗಿ ಇಟ್ಟುಕೊಂಡು ಈ ಗ್ರಂಥಮಾಲೆಯನ್ನು ಆರಂಭಿಸಲಾಯಿತು. ಈ ಈ ಪ್ರಕಟನೆಯನ್ನು ಆ ವರ್ಷದ ಭಾರತ ಭಾಷಾ ವಾಙ್ಮಯಗಳ ವರದಿ ಮೆಚ್ಚಿ ಕೊಂಡಾಡಿತು. ಬಹುಸಂಖ್ಯೆಯ ಕನ್ನಡ ಕೃತಿಗಳನ್ನೂ ಕೃತಿಕಾರರನ್ನೂ ಬೆಳಕಿಗೆ ತಂದ 'ಕರ್ಣಾಟಕ ಗ್ರಂಥಮಾಲೆ' ಒಂದು ಕಡೆ ಸ್ವತಂತ್ರ ಹೊಸಗನ್ನಡ ಸಾಹಿತ್ಯ ಕೃತಿಗಳನ್ನೂ ಅನುವಾದಗಳನ್ನೂ ಬೆಳಕಿಗೆ ತಂದರೆ, ಇನ್ನೊಂದು ಕಡೆ ಹೊಸಗನ್ನಡ ಗದ್ಯ ಶೈಲಿಯನ್ನೂ ಪಳಗಿಸಿತು. ಅನುವಾದಗಳಿಗೆ ಇಂಗ್ಲಿಷ್, ಜರ್ಮನ್ ಮತ್ತು ಸಂಸ್ಕೃತ ಭಾಷಾ ಕೃತಿಗಳನ್ನು ಬಳಸಿಕೊಳ್ಳಲಾಯಿತು. ಬಿ.ಎಂ. ಶ್ರೀಕಂಠಯ್ಯನವರ 'ಇಂಗ್ಲಿಷ್ ಗೀತಗಳು' ಎಂಬ ಅನುವಾದ ಪದ್ಯಗಳ ಸಂಕಲನ ಮೊದಲ ಸಲ ಬೆಳಕಿಗೆ ಬಂದುದು (೧೯೨೧) ಇದೇ ಗ್ರಂಥಮಾಲೆಯಿಂದಲೇ. ಈ ಕೃತಿ ಹೊಸಗನ್ನಡ ಕವಿತೆಯ ಮಾರ್ಗದರ್ಶಕ ಕೃತಿಯೆಂಬುದು ಈಗ ತಿಳಿದ ವಿಷಯವೇ ಆಗಿದೆ.

ಶಾಮರಾಯರು ಮುಂದೆ ನಿಂತು ಸಾಧ್ಯಮಾಡಿದ ಇನ್ನೊಂದು ಸ್ಮರಣಾರ್ಹ ಸಾಹಿತ್ಯಕಾರ್ಯ ಎಂದರೆ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆ. ಇದಕ್ಕಾಗಿ ಸರ್ಕಾರ ೧೯೧ಳರಲ್ಲಿ ಒಂದು ಉಪಸಮಿತಿಯನ್ನು ನೇಮಿಸಿದಾಗ, ಸದಸ್ಯರಲ್ಲಿ

ಮೊದಲ ಹೆಸರು ಶಾಮರಾಯರದು. ಹೀಗೆ ಸ್ಥಾಪನೆಗೊಂಡ ಪರಿಷತ್ತಿನ ಪ್ರಥಮ ಉಪಾಧ್ಯಕ್ಷರೂ ಅವರೇ (೧೯೧೫-೧೯). ಈ ಸಂಸ್ಥೆ ರೂಪುಗೊಳ್ಳುವ ಮೊದಲು, ೧೮೮೦ರಲ್ಲಿ, ಚಾಮರಾಜೇಂದ್ರ ಒಡೆಯರ ಕಾಲದಲ್ಲಿ ಜನ್ಮತಳೆದ ಮೈಸೂರಿನ 'ಕರ್ಣಾಟಕ ಭಾಷೋಜ್ಜೀವಿನೀ ಸಭಾ 'ದ ಸ್ಥಾಪನೆಯಲ್ಲಿಯೂ ಅವರ ಪಾತ್ರ ವಿದ್ದಿತೆನ್ನುವುದನ್ನಿಲ್ಲಿ ನೆನೆಯಬೇಕು. ಇದಲ್ಲದೆ ಧಾರವಾಡದ ' ಕರ್ನಾಟಕ ವಿದ್ಯಾ ವರ್ಧಕ ಸಂಘ 'ದ ಗಾಢ ಸಂಬಂಧವೂ ಅವರಿಗಿದ್ದಿತು. ೧೮೯೦ರಲ್ಲಿ ಈ ಸಂಸ್ಥೆ ಸ್ಥಾಪನೆಯಾದಂದಿನಿಂದ ಅವರು ಅದರ ಸಾಹಿತ್ಯಪೋಷಣೆಯ ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತಿದ್ದರು. ಶಾಮರಾಯರ ಕನ್ನಡ ಬೆಳವಣಿಗೆಯ ಈ ಶ್ರದ್ಧೆ, ಉತ್ಸಾಹ ಗಳನ್ನು ೧೯೩೮ನೆಯ ಏಪ್ರಿಲ್-ಮೇ ತಿಂಗಳಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಐದನೆಯ ವಸಂತ ಸಾಹಿತ್ಯೋತ್ಸವ ಸಂದರ್ಭದಲ್ಲಿ, ಬಿ. ಎಂ. ಶ್ರೀಕಂಠಯ್ಯನವರು ಹೃತ್ಪೂರ್ವಕವಾಗಿ ಕೊಂಡಾಡಿದ್ದಾರೆ.

ಶಾಮರಾಯರು ಸಂಸ್ಕೃತ ಅಕಾಡೆಮಿ ಆಫ್ ಇಂಡಿಯದ ಕಾರ್ಯಸಮಿತಿ ಯಲ್ಲಿಯೂ ಸದಸ್ಯರಾಗಿದ್ದರು; ಸಂಸ್ಕೃತ ರಿಸರ್ಚ್ ತ್ರೈಮಾಸಿಕ ಪತ್ರಿಕೆಯ ಸಂಪಾದಕ ಮಂಡಲಿ ಸದಸ್ಯರೂ ಆಗಿದ್ದರು. ಇದನ್ನು ಗಮನಿಸಿದಾಗ ಅವರ ಆಸಕ್ತಿಗಳು ವಿವಿಧವಾಗಿದ್ದುವು ಎಂದು ತಿಳಿಯುವುದು. ಇತಿಹಾಸ, ಶಿಕ್ಷಣಶಾಸ್ತ್ರ, ವಿಚಾರಸಾಹಿತ್ಯ, ವೇದಾಂತ—ಇವು ಇವರಿಗೆ ಇಷ್ಟವಾದ ವ್ಯಾಸಂಗ ವಿಷಯಗಳಾಗಿ ದ್ದುವು. ಅವರ ಸಾಹಿತ್ಯ ಪೋಷಣೆಯ ಕಾರ್ಯದಲ್ಲಿ ಅವರಿಗೆ ನೆರವಾಗುತ್ತಿದ್ದ ಬಾಪು ಸುಬ್ಬರಾಯರು ಅವರಿಗೆ ಗ್ರಂಥ ವ್ಯಾಸಂಗದಲ್ಲಿಯೂ ಜೊತೆಯಾಗಿರು ತ್ತಿದ್ದರು. ಶಾಮರಾಯರು ಸ್ವತಂತ್ರರಾಗಿ ಹಲವು ಲೇಖನಗಳನ್ನೂ ಪ್ರಬಂಧ ಗಳನ್ನೂ 'ಹಿತಬೋಧಿನಿ', 'ವಿದ್ಯಾದಾಯಿನಿ' ಪತ್ರಿಕೆಗಳಲ್ಲಿ ಬರೆದಿದ್ದಾರೆ. ಅವರು ನಮ್ಮ ಆದ್ಯ ಕನ್ನಡ ಪ್ರಬಂಧಕಾರರಲ್ಲಿ ಒಬ್ಬರು. ಕನ್ನಡದಲ್ಲಿ ಬುದ್ಧನ ಬಗೆಗೆ ಪರಿಚಯ ಲೇಖನಗಳನ್ನು ಬರೆದವರಲ್ಲಿ ಪ್ರಾಯಃ ಅವರೇ ಮೊದಲಿಗರು. ಕನ್ನಡ ದಲ್ಲಿ ಬರೆಯುತ್ತಿದ್ದ, ಬರೆಯಲು ಅಧೈರ್ಯಪಡುತ್ತಿದ್ದ ತಮ್ಮ ಕಾಲದ ಹಲವಾರು ಲೇಖಕರನ್ನು ಅವರು ಪ್ರೋತ್ಸಾಹಿಸಿದ್ದಾರೆ; ಮೆಚ್ಚುಮಾತುಗಳನ್ನೂ ಮುನ್ನುಡಿ ಗಳನ್ನೂ ಬರೆದುಕೊಟ್ಟಿದ್ದಾರೆ.

ಗ್ರಂಥಗಳು : ಎಂ. ಶಾಮರಾಯರು ಕನ್ನಡದಲ್ಲಿ ಎರಡು ಪುಸ್ತಕಗಳನ್ನೂ ಇಂಗ್ಲಿಷಿನಲ್ಲಿ ಮೂರು ಪುಸ್ತಕಗಳನ್ನೂ ರಚಿಸಿದ್ದಾರೆ. ಇವೆಲ್ಲ ಮೈಸೂರಿನ ಇತಿ ಹಾಸಕ್ಕೆ, ಹೆಚ್ಚಾಗಿ ಆಧುನಿಕ ಕಾಲದ ಇತಿಹಾಸಕ್ಕೇ ಮೀಸಲಾದವಾಗಿವೆ. ಕನ್ನಡ ದಲ್ಲಿ ಬರೆದಿರುವ, ಎರಡು ಭಾಗಗಳ 'ಮಹಿಶೂರ ಸಂಸ್ಥಾನದ ಚರಿತ್ರೆ' ಹಾಗೂ 'ಮೈಸೂರು ಸಂಸ್ಥಾನದ ಚರಿತ್ರಸಾರ' (೧೮೯೦ ?) ಶಾಲಾ ವಿದ್ಯಾರ್ಥಿಗಳಿಗೆ ಹಾಗೂ ಸಾಮಾನ್ಯ ಓದುಗರಿಗೆ ಒಂದು ಕಾಲಕ್ಕೆ ತುಂಬ ಉಪಯುಕ್ತವಾದ ಮೈಸೂರು ಇತಿಹಾಸದ ಕೈಪಿಡಿಗಳಾಗಿದ್ದುವು. ಎರಡನೆಯ ಪುಟ್ಟಗ್ರಂಥ ಹಲವು

ಪುನರ್ಮುದ್ರಣಗಳನ್ನು ಕಂಡಿತು ; ಇದರ ಐದನೆಯ ಪರಿಷ್ಕರಣ (೧೯೧೯) ಪ್ರಕಟನಾದಾಗ, ಅದರ ೨೦,೦೦೦ ಪ್ರತಿಗಳನ್ನು ಮುದ್ರಿಸಲಾಯಿತೆಂದು ತಿಳಿಯುವುದು.

ಶಾಮರಾಯರು ತಮ್ಮ ಕಾಲಕ್ಕೆ ದೊರೆಯುತ್ತಿದ್ದ ಮೈಸೂರು, ಇತಿಹಾಸದ ಲಿಖಿತ ದಾಖಲೆಗಳಲ್ಲಿ ಹೆಚ್ಚಿನವನ್ನು ತಾವೇ ಸ್ವತಃ ಪರಿಶೀಲಿಸಿ, ವಿಲ್ಕ್ಸ್ ಮೊದಲಾದವರ ಚರಿತ್ರೆಗಳನ್ನೂ ಬುಕನನ್ ಮೊದಲಾದವರ ಬರೆಹಗಳನ್ನೂ ಓದಿಕೊಂಡು ತಮ್ಮ ಪುಸ್ತಕಗಳಲ್ಲಿ ಅವುಗಳ ಸಾರಾಂಶವನ್ನಷ್ಟೇ ಛಟ್ಟಯಿಳಿಸಿದ್ದಾರೆ. ಚರಿತ್ರೆಯ ಘಟನೆಗಳನ್ನು ಸಾಧ್ಯವಿದ್ದಮಟ್ಟಿಗೆ ಅವು ನಡೆದ ಹಾಗೆಯೇ ನಿರೂಪಿಸಬೇಕು, ವ್ಯಕ್ತಿಗಳನ್ನು ಅವರ ಸ್ವಭಾವ ವರ್ತನೆಗಳಿಗೆ ತಕ್ಕಹಾಗೆಯೇ ಚಿತ್ರಿಸಬೇಕು ಎಂಬುವು ಅವರ ಧ್ಯೇಯಗಳಾಗಿದ್ದುವು. ತಮ್ಮ ನಿರೂಪಣೆಯಲ್ಲಿ ಅವರು ಜಾತಿ ಪಂಥಗಳನ್ನು ವಹಿಸಿಕೊಳ್ಳಲು ಹೋಗಿಲ್ಲ. ದೊರೆ ದಳವಾಯಿಗಳೆಂದು ಭೇದ ಮಾಡಿಲ್ಲ. ಒಂದು ಶತಮಾನದ ಹಿಂದೆ ಚಿಕ್ಕವರಿಗಾಗಿ ಬರೆದ ಚರಿತ್ರೆಯ ಪುಸ್ತಕಗಳು ಹೇಗಿದ್ದುವೆಂದು ತಿಳಿಯಲು ಈ ಪುಸ್ತಕಗಳನ್ನು ನಾವು ಓದಬೇಕು.

'ಟೆನ್ ಇಯರ್ಸ್ ಆಫ್ ನೇಟಿವ್ ರೂಲ್ ಇನ್ ಮೈಸೂರು' (೧೮೯೧): ಈ ಗ್ರಂಥದಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಬ್ರಿಟಿಷ್ ಆಳಿಕೆಯ ಸಿಂಹಾವಲೋಕನವೂ ಎರಡನೆಯ ಭಾಗದಲ್ಲಿ ದೇಶೀಯರಾದ ಮೈಸೂರರಸರ ಆಳಿಕೆಯ ನಿರೂಪಣೆಯೂ ಇಲ್ಲಿ ಯಥಾಕ್ರಮದಲ್ಲಿ ಬಂದಿವೆ. ದೇಶೀಯ ಸಂಸ್ಥಾನಿಕರ ಕೈಯಲ್ಲಿ ಮೈಸೂರು ಸಾಧಿಸಿದ ಪ್ರಗತಿಯನ್ನು ಕುರಿತು ಬರೆದರೆ ಜನರಿಗೆ ಅದು ಕುತೂಹಲಕರವಾಗಿರುತ್ತದೆಯೆಂದು ತೋರಿ, ಆ ಪ್ರಯತ್ನವನ್ನು ತಾವು ಮಾಡಿರುವುದಾಗಿ ಲೇಖಕರು ಪೀಠಿಕೆಯ ಭಾಗದಲ್ಲಿ ತಿಳಿಸಿದ್ದಾರೆ. ಮೊದಲ ಭಾಗದಲ್ಲಿ ಟಿಪ್ಪುವಿನ ಪತನದ ಅನಂತರದಲ್ಲಿ ಮೈಸೂರು ರಾಜ್ಯದ ಆಡಳಿತವನ್ನು, ಮುಮ್ಮಡಿ ಕೃಷ್ಣರಾಜ ಒಡೆಯರ ಕೈಯಿಂದ ತಮ್ಮ ಕೈಗೆ ತೆಗೆದುಕೊಂಡು ಬ್ರಿಟಿಷರು ಹೇಗೆ ನಿರ್ವಹಿಸಿದರೆಂಬ ವಿಸ್ತಾರವಾದ ಕಥನವಿದೆ (೧೮೩೧-೮೧) ; ಎರಡನೆಯ ಭಾಗದಲ್ಲಿ ಪುನರಾರಂಭಗೊಂಡ ಮೈಸೂರು ಅರಸುಮನೆತನದ ಆಳಿಕೆಯಲ್ಲಿ (೧೮೮೧-೯೧) ಸಂಸ್ಥಾನ ಹೇಗೆ ಪ್ರಗತಿಪಥದಲ್ಲಿ ಸಾಗಿತು ಎಂಬುದರ ನಿರೂಪಣೆಯಿದೆ. ಈ ಹತ್ತು ವರ್ಷಗಳ ಅವಧಿಯಲ್ಲಿ ಒಳ್ಳೆಯ ಆಡಳಿತ ಕೈಗೂಡಿ, ಉಳಿದ ದೇಶೀಯ ಸಂಸ್ಥಾನಗಳೂ ಅಷ್ಟೇಕೆ, ಬ್ರಿಟಿಷ್ ಸರ್ಕಾರ ಸಹ ಕಲಿಯತಕ್ಕ ಅನೇಕ ಸುಧಾರಣೆಗಳೂ ಸೌಲಭ್ಯಗಳೂ ಏರ್ಪಟ್ಟುವೆಂಬುದನ್ನು ಶಾಮರಾಯರು ಸಕಾರಣವಾಗಿ ಪ್ರತಿಪಾದಿಸಿದ್ದಾರೆ.

ಈ ಪುಸ್ತಕದ ಸಿದ್ಧತೆಗೆ ದಿವಾನ್ ಶೇಷಾದ್ರಿ ಅಯ್ಯರ್ ಅವರ ಕಛೇರಿಯಲ್ಲಿದ್ದ ಹಳೆಯ ಕಡತಗಳ ಸಹಾಯವನ್ನು ಶಾಮರಾಯರು ಪಡೆದುಕೊಂಡಿದ್ದಾರೆ ; ಬೆಂಗಳೂರು ಗ್ರಂಥ ಭಂಡಾರದ ನೆರವು ಪಡೆದಿದ್ದಾರೆ ; ಸ್ವಾನುಭವದ ಸಂಗತಿಗಳನ್ನು ಕೂಡಿಸಿದ್ದಾರೆ. ಈ ದೃಷ್ಟಿಯಿಂದ ಈ ಕೃತಿಗೆ ಸಂಶೋಧನ ಮೌಲ್ಯವಿದೆ.

'ದಿ ಇಂಡಿಯನ್ ಹೀರೋಸ್' (೧೯೨೨) : ಇದು ಒಂದು ಸಂಪಾದಿತ ಗ್ರಂಥ. ಪ್ರಸಿದ್ಧ ಲೇಖಕರಾದ ರಾಧಾಕುಮುದ ಮುಖರ್ಜಿ, ಆರ್. ನರಸಿಂಹಾಚಾರ್ಯ, ಸಿ. ಹಯವದನರಾವ್, ಎಂ. ಎಸ್. ಪುಟ್ಟಣ್ಣ ಮೊದಲಾದವರು ಬರೆದ ಕೆಲವು ಬರೆಹಗಳು ಇಲ್ಲಿ ಸಂಕಲಿತವಾಗಿವೆ. ಶಾಮರಾಯರು ಸ್ವತಃ ಐದು ಬರೆಹಗಳನ್ನು ಬರೆದಿದ್ದಾರೆ. ಭರತಖಂಡದ ಇತಿಹಾಸದಲ್ಲಿ ವೀರಪುರುಷರೆಂದು ಖ್ಯಾತರಾದವರ ಸಂಕ್ಷಿಪ್ತ ಐತಿಹಾಸಿಕ ಕಥನಗಳಿವೆ ಇಲ್ಲಿ. ಗ್ರಂಥದ ಅರ್ಧದಷ್ಟು ಭಾಗ ಚಿಕ್ಕಪುಟ್ಟ ವೀರರೂ ಸೇರಿದಂತೆ ಕರ್ನಾಟಕದ ವೀರಪುರುಷರ ವೃತ್ತಾಂತಗಳಿಂದಲೇ ತುಂಬಿರುವುದು ಗಮನಿಸತಕ್ಕುದಾಗಿದೆ. ಶಾಮರಾಯರು ಸ್ವತಃ ಬರೆದ ಭಾಗಗಳು ಎಂದರೆ ಹೈದರ್ ಅಲಿ (೧, ೨), ಮೈಸೂರಿನ ಮಹಾರಾಣಿ ಲಕ್ಷಮ್ಮಣ್ಣಿ, ಈಚಿನ ಜರ್ಮನ್ ಯುದ್ಧದಲ್ಲಿ ಭಾರತೀಯರ ಶೌರ್ಯ ಪ್ರದರ್ಶನ ಮತ್ತು ಈಚಿನ ಜರ್ಮನ್ ಯುದ್ಧದಲ್ಲಿ ಮೈಸೂರಿನವರ ಶೌರ್ಯಪ್ರದರ್ಶನ ಎಂಬವು.

ಈ ಬಗೆಯ ಪುಸ್ತಕವನ್ನು ಸಿದ್ಧಪಡಿಸುವಂತೆ ಶಾಮರಾಯರನ್ನು ಪ್ರೇರೇಪಿಸಿದವರು ಅಂದಿನ ಮೈಸೂರಿನ ಯುವರಾಜರು. ಮೊದಲನೆಯ ಮಹಾಯುದ್ಧ (೧೯೧೪) ವಿಪತ್ಕಾರಕವಾಗಿ ಪರಿಣಮಿಸಿದಾಗ ಜನರಲ್ಲಿ ವೀರೋತ್ಸಾಹಗಳನ್ನು ತುಂಬಬೇಕೆಂದು ಈ ಪುಸ್ತಕವನ್ನು ಸಿದ್ಧಪಡಿಸಲಾಯಿತು. ಶಾಮರಾಯರು ಈ ಗ್ರಂಥದ ಮುನ್ನುಡಿಯಲ್ಲಿ ಬರೆದಿರುವ ಮಾತುಗಳು ಆಶ್ಚರ್ಯಕರವಾಗಿ ಇಂದಿನ ಪರಿಸ್ಥಿತಿಗೂ ಒಪ್ಪುವಂತಿವೆ. ಆ ಕೆಲವು ಪಂಕ್ತಿಗಳು ಹೀಗಿವೆ : ಜರ್ಮನ್ ಯುದ್ಧವೇನೋ ನಿಂತಿತು. ಆದರೂ ವಿಶ್ವಶಾಂತಿಗೆ ಇರುವ ಅಪಾಯವೇನೂ ತಗ್ಗಿಲ್ಲವಾದ್ದರಿಂದ ಸರ್ಕಾರವು ವಿಶ್ವವಿದ್ಯಾನಿಲಯದ ವಿದ್ಯಾರ್ಥಿದಳಗಳನ್ನು ರಚಿಸುತ್ತಲೂ ಇತರ ವಿಧಗಳಲ್ಲೂ ಸೇನಾಶಕ್ತಿಯನ್ನು ಬೆಳಸಲು ಯತ್ನಿಸುತ್ತಿರುವುದರಿಂದ, ಈ ಬಗೆಯ ಪುಸ್ತಕದ ಅಗತ್ಯ ಬಹುವಾಗಿದೆ. ಭಾರತದ ಸ್ವಾಯತ್ತತೆಗೆ ಆಂತರಿಕ ಕ್ಷೋಭೆಗಳನ್ನೂ ಪರಕೀಯ ಆಕ್ರಮಣಗಳನ್ನೂ ಎದುರಿಸಬೇಕಾಗಿ ಬರುವುದು ತಪ್ಪದು. ಇನ್ನೂ ಭಾರತದ ವಾಯುವ್ಯ ದಿಕ್ಕಿನಿಂದಲೂ ಸಮುದ್ರದ ಕಡೆಯಿಂದಲೂ ಅಪಾಯಗಳುಂಟು. ಬ್ರಿಟಿಷ್ ಕಾಮನ್‌ವೆಲ್ತ್ ರಾಷ್ಟ್ರಗಳ ಗೌರವಸದಸ್ಯ ಸ್ಥಾನವನ್ನು ಕಾಪಾಡಿಕೊಳ್ಳಲು ಭಾರತದ ಜನರಲ್ಲಿ ಒಂದು ಕ್ಷಾತ್ರಗುಣ ವೃದ್ಧಿಯಾಗಬೇಕು.

ಇಲ್ಲಿಯ ಎಲ್ಲ ಬರೆಹಗಳಲ್ಲಿಯೂ ಸಮಕಾಲೀನ ದಾಖಲೆಗಳ ಹಾಗೂ ಹೇಳಿಕೆಗಳ ಮೂಲಕವಾದ ಸಮರ್ಥನೆಯಿದೆ; ಶ್ಲಾಘ್ಯವಾದ ಸಂಪಾದನ ಕೌಶಲ ವ್ಯಕ್ತವಾಗಿದೆ.

'ಮಾಡರ್ನ್ ಮೈಸೂರ್' (೧, ೨) (೧೯೩೬) : ಇದು ಶಾಮರಾಯರ ಗ್ರಂಥಗಳಲ್ಲೆಲ್ಲ ಬಹುದೊಡ್ಡದು; ಗಣ್ಯವಾದುದು. ಇದರ ಮೊದಲ ಸಂಪುಟದಲ್ಲಿ ಮೈಸೂರು ಅರಸು ಮನೆತನದ ಆರಂಭ ಕಾಲದಿಂದ ತೊಡಗಿ ೧೮೬೮ರ ವರೆಗೆ, ಎರಡನೆಯ ಸಂಪುಟದಲ್ಲಿ ಆ ವರ್ಷ ಜರುಗಿದ ಚಾಮರಾಜೇಂದ್ರ ಒಡೆಯರ

ಪಟ್ಟಾಭಿಷೇಕದಿಂದ ಹಿಡಿದು ೧೯೩೨ರವರೆಗೆ ಮೈಸೂರು ಇತಿಹಾಸದ ಸವಿಸ್ತೃತ ಕಥನವಿದೆ. ೧೮೪ ಅಧ್ಯಾಯಗಳ ಎರಡೂ ಸಂಪುಟಗಳ ಗಾತ್ರ ೧೧೧೦೭ ಪುಟಗಳ ಪ್ರಮಾಣದ್ದು. ಈ ಗ್ರಂಥದ ರಚನೆಗೆ ಲೇಖಕರು ಖಾಸಗಿ ದಾಖಲೆಗಳನ್ನೂ ಬಹು ವಿಧದ ಇತರ ಗ್ರಂಥಗಳನ್ನೂ ಬಳಸಿದ್ದಾರೆ. ಮಿರ್ಜಾ ಇಸ್ಮಾಯಿಲ್, ಎನ್. ಮಾಧವರಾವ್, ಎ. ವಿ. ರಾಮನಾಥನ್, ತಂಬೂಚೆಟ್ಟಿ ಈ ಕೆಲವು ಮಹನೀಯರ ನೆರವನ್ನು ಅವರು ಪಡೆದುಕೊಂಡಿದ್ದಾರೆ.

'ಮಾಡರ್ನ್ ಮೈಸೂರ್' ಆಧುನಿಕ ಮೈಸೂರಿನ ಇತಿಹಾಸದ ಒಂದು ಆಧಾರಗ್ರಂಥ. ಮೈಸೂರು ಅರಸುಮನೆತನದ ಇತಿಹಾಸದ ಸಿಂಹಾವಲೋಕನದ ಅನಂತರ ನಿರೂಪಿತವಾಗಿರುವ ಸೈನ್ಯಕೀಯ ಘಟನೆಗಳೂ ಆಡಳಿತ ವ್ಯವಸ್ಥೆಗಳೂ ಸಾಮಾಜಿಕ ಆರ್ಥಿಕ ವಿದ್ಯಮಾನಗಳೂ ಗ್ರಂಥದ ತಿರುಳಾಗಿದೆ. ಈ ಭಾಗದ ಒಂದು ಹೊಸ ಸಂಗತಿಯೆಂದರೆ, ಅಂದಿನ ಭಾರತದ ಗವರ್ನರ್ ಜನರಲ್ ಲಾರ್ಡ್ ವಿಲಿಯಂ ಬೆಂಟಿಂಕನು ೧೮೩೧ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಆಡಳಿತದ ಹಕ್ಕುಗಳನ್ನು ಕಸಿದುಕೊಂಡ ಸಂದರ್ಭದ ವಿದ್ಯಮಾನಗಳ ಬಗೆಗೆ ಹೊಸ ಬೆಳಕು ಚೆಲ್ಲಿರುವುದೇ ಆಗಿದೆ. ಮದ್ರಾಸ್ ಸರಕಾರವು ಅಂದು ಸರಿಯಾಗಿ ವಿಮರ್ಶಿಸದೆ ಮಾಡಿದ ಸೂಚನೆಗಳ ಮೇಲೆ ತಾವು ವರ್ತಿಸಿದ್ದು ದೊರೆಗೆ ಅನ್ಯಾಯ ಮಾಡಿತು ಎಂದು ಆತನು ಆಮೇಲೆ ಪಶ್ಚಾತ್ತಾಪ ಪಟ್ಟನೆಂದು ಇಲ್ಲಿ ಹೇಳಲಾಗಿದೆ. ಎರಡನೆಯ ಸಂಪುಟದಲ್ಲಿ ೧೮೬೮–೧೯೩೨ರ ಅವಧಿಯ ಮೈಸೂರಿನ ರಾಜಕೀಯ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ನಿರೂಪಣೆಯಿದೆ. ಇವರಲ್ಲಿ ಚಾಮರಾಜ ಒಡೆಯರ ಕಾಲದಲ್ಲಿ ಒಂದು ಬಗೆಯಲ್ಲಿ ಪ್ರಜಾಪ್ರತಿನಿಧಿ ಸಭೆ ವ್ಯವಸ್ಥೆಗೊಂಡುದು ಮೊದಲಾಗಿ ಪ್ರಜಾಹಿತೈಷಿಗಳೂ ಉದಾರಿಗಳೂ ಆದ ದೊರೆಗಳು ಪ್ರಜೆಗಳಿಗೆ ನೀಡಿದ ಸ್ವಾತಂತ್ರ್ಯ ಸೌಲಭ್ಯಗಳ ಕಥನವಿದೆ.

ಈ ಪುಸ್ತಕದ ಪ್ರಕಟಣೆ ದೇಶಾದ್ಯಂತ ವಿದ್ವಾಂಸರ, ವಿಮರ್ಶಕರ ಗಮನ ಸೆಳೆಯಿತು. ಹಲವಾರು ಪತ್ರಿಕೆಗಳಲ್ಲಿ ಮುಕ್ತಕಂಠದ ವಿಮರ್ಶೆಗಳು ಪ್ರಕಟವಾಗಿರುವುದನ್ನು ನೋಡಿದರೆ ಇದು ತಿಳಿಯುವುದು.

ಶಾಮರಾಯರು ಬರೆದ ಕನ್ನಡದ ಬಿಡಿಬರೆಹಗಳು ಒಂದು ಸಂಪುಟವಾಗಿ ಇನ್ನೂ ಪ್ರಕಟವಾಗಬೇಕಾಗಿದೆ. ಹಾಗೆಯೇ ಇಂಗ್ಲಿಷ್ ಭಾಷೆಯಲ್ಲಿರತಕ್ಕವೂ ಒಗ್ಗೂಡಬೇಕಾಗಿದೆ. ಮೈಸೂರ್ ಯೂನಿವರ್ಸಿಟಿ ಮ್ಯಾಗಜೈನ್‌ನಲ್ಲಿರುವ ಒಂದೆರಡು ವ್ಯಕ್ತಿಚಿತ್ರಗಳು ಉತ್ಕೃಷ್ಟ ಸಮಕಾಲೀನ ಜೀವನಚರಿತ್ರೆಗಳಾಗಿವೆ. ಇದೇ ಪತ್ರಿಕೆಯಲ್ಲಿರುವ 'ಇಂಡಸ್ಟ್ರಿಯಲ್ ಡಿಪ್ರೆಷನ್ ಇನ್ ಯೂರೋಪ್' ಎಂಬ ಲೇಖನ (ಸಂ. ೬, ಪು. ೨೦೪–೧೩) ಯೂರೋಪ್ ಖಂಡದ ಔದ್ಯಮಿಕ ಕ್ಷೇತ್ರದ ಕ್ಷೀಣದಶೆ ಮುಗ್ಗುಟ್ಟುಗಳನ್ನು ಇಡಿಯಾದ ನೋಟದಲ್ಲಿ ಸಮರ್ಥವಾಗಿ, ಧೈರ್ಯವಾಗಿ ವಿಮರ್ಶಿಸುತ್ತದೆ. ಮುಮ್ಮಡಿ ಕೃಷ್ಣರಾಜ ಒಡೆಯರ ಜಯಂತ್ಯುತ್ಸವದ

ಭಾಷಣ ಆ ದೊರೆಯನ್ನು ಕುರಿತ ಬರೆಹಗಳಲ್ಲೆಲ್ಲ ಸರ್ವಸಂಗ್ರಹಕವೂ ಸಾರವತ್ತಾದುದೂ ಆಗಿರುವಂತೆ ತೋರುತ್ತದೆ. ಅವರು ಚಾಮರಾಜೇಂದ್ರ ಒಡೆಯರ ಬಾಲ್ಯ ವಿದ್ಯಾಭ್ಯಾಸಗಳ ಬಗೆಗೆ ಬರೆದ ಲೇಖನ ಇಂದು ನೋಡಲು ದೊರೆಯುತ್ತಿಲ್ಲ. ಹಾಗೆಯೇ ಇತರ ಎಷ್ಟೋ ಬರೆಹಗಳ ಶೀರ್ಷಿಕೆಗಳು ತಿಳಿದಿದ್ದರೂ ಲೇಖನಗಳು ಎಲ್ಲಿ ಪ್ರಕಟವಾಗಿವೆಯೆಂಬುದು ತಿಳಿಯದು. ದೇಶದ ನಾನಾ ಭಾಗಗಳ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆಯುವ ಹಾಗೆ ದಿವಾನ್ ಮಿರ್ಜಾ ಅವರು ಶಾಮರಾಯರನ್ನು ಮೇಲಿಂದ ಮೇಲೆ ಪ್ರೋತ್ಸಾಹಿಸುತ್ತಿದ್ದರು. ಇವರೂ ತಮ್ಮ ಲೇಖನಗಳನ್ನು ದೊರೆಗಳಿಗೂ ದಿವಾನರಿಗೂ ಕಳಿಸಿಕೊಡುವುದು ಸಾಮಾನ್ಯವಾಗಿತ್ತು.

ಶಾಮರಾಯರಿಗೂ ಆ ಕಾಲದ ದಿವಾನರು, ಸರ್ಕಾರದ ಹಿರಿಯ ಅಧಿಕಾರಿಗಳು, ಇತರ ಗಣ್ಯವ್ಯಕ್ತಿಗಳಿಗೂ ಬಹುವಾಗಿ ಪತ್ರ ವ್ಯವಹಾರಗಳು ನಡೆದಿವೆ. ಇವುಗಳ ಒಂದು ಕಟ್ಟನ್ನು ಶಾಮರಾಯರ ಮೊಮ್ಮಕ್ಕಳಾದ ರಾಮರಾಯರ ಕೃಪೆಯಿಂದ ನಾನು ನೋಡಿ, ನನ್ನ ಬೇರೆ ಬರವಣಿಗೆಗೆ ಸ್ವಲ್ಪಮಟ್ಟಿಗೆ ಬಳಸಿಕೊಂಡಿದ್ದೇನೆ. ದಿಟವಾಗಿ ಈ ಪತ್ರಗಳು ಸರ್ಕಾರದ ಅಧಿಕೃತ ಪತ್ರಾಗಾರದಲ್ಲಿ ಸಂಗ್ರಹವಾಗಬೇಕಾದ ಮೌಲ್ಯವುಳ್ಳವು. ಇವುಗಳಲ್ಲಿ ಒಂದು ಕುತೂಹಲಕರವಾದ ಬರೆಹದ ಬಗ್ಗೆ ನಾನು ಹೇಳಬೇಕು. ಮೈಸೂರಿನ ದರ್ಬಾರ್ ಭವನಕ್ಕೆ ಹರಿಜನರ ಪ್ರವೇಶದ ವಿಷಯದಲ್ಲಿ ಸರ್ಕಾರ ಶಾಮರಾಯರನ್ನು ಸಲಹೆ ನೀಡುವಂತೆ ಕೇಳಿದಾಗ, ಅವರು ಸಿದ್ಧಪಡಿಸಿ ಸರ್ಕಾರಕ್ಕೆ ಒಪ್ಪಿಸಿದ ಸುಮಾರು ೬ ಪುಟಗಳಷ್ಟು ವಿಸ್ತಾರವಾದ 'ಮೆಮೊರ್ಯಾಂಡಂ' ಇದು (೧೮-೬-೧೯೩೬). ಐತಿಹಾಸಿಕವಾಗಿಯೂ ಸಾಮಾಜಿಕವಾಗಿಯೂ ಹರಿಜನರ ಸ್ಥಾನ-ಮಾನಗಳನ್ನು ಸಹಾನುಭೂತಿಯಿಂದ ವಿವೇಚಿಸಿ, ದರ್ಬಾರಿಗೆ ಅವರ ಪ್ರವೇಶವನ್ನು ಸಕಾರಣವಾಗಿ ಸಮರ್ಥಿಸಿರುವುದನ್ನು ಇಲ್ಲಿ ಕಾಣಬಹುದಾಗಿದೆ.

# ಚಂದ್ರವಳ್ಳಿ ಶಾಸನದ ಮೇಲೆ ಹೊಸಬೆಳಕು

ಬಿ. ರಾಜಶೇಖರಪ್ಪ

ಕ್ರಿಸ್ತಶಕ ನಾಲ್ಕನೆಯ ಶತಮಾನದ ಮೊದಲಲ್ಲಿ, ಕನ್ನಡನಾಡಿನ ಬನವಾಸಿ ಪ್ರದೇಶದಲ್ಲಿ, ಯಜ್ಞಕಾರ್ಯ ಪೌರೋಹಿತ್ಯ ಪಾಂಡಿತ್ಯ ಆತಿಥ್ಯಗಳಿಗೆ ಹೆಸರಾಗಿದ್ದ 'ಕದಂಬ' ಹೆಸರಿನ ಒಂದು ಬ್ರಾಹ್ಮಣ ಮನೆತನಕ್ಕೆ ಸೇರಿದ ಯುವಕ ಮಯೂರ ಶರ್ಮ, ಉನ್ನತ ವ್ಯಾಸಂಗಕ್ಕಾಗಿ ತಮಿಳುನಾಡಿನ ಕಾಂಚೀಪಟ್ಟಣಕ್ಕೆ ಹೋದನು. ಅಲ್ಲಿ ಒಮ್ಮೆ ಪಲ್ಲವರೊಂದಿಗೆ ಕಲಹವಾಗಿ ಅವನಿಗೆ ತೀವ್ರ ಅವಮಾನವಾಯಿತು. ಇದರಿಂದ ರೊಚ್ಚಿದ್ದ ಅವನು ಬ್ರಾಹ್ಮಣತ್ವವನ್ನು ಬಿಟ್ಟು, ಕ್ಷಾತ್ರವನ್ನು ಕೈಕೊಂಡು ತಾನೂ ರಾಜ್ಯ ಕಟ್ಟಬೇಕೆಂದು ಸಂಕಲ್ಪಮಾಡಿದನು. ಸ್ವಲ್ಪ ಕಾಲ ಶ್ರೀಪರ್ವತದ(?) ಬಳಿಯ ಕಗ್ಗಾಡಿನಲ್ಲಿ ವಾಸವಾಗಿದ್ದು, ಸೈನ್ಯಕಟ್ಟಿ, ಪಲ್ಲವರ ಗಡಿನಾಡಿನ ದೊರೆಗಳನ್ನು ಗೆದ್ದನು. ಇದರಿಂದ ಕೆರಳಿದ ಪಲ್ಲವರು ತಮ್ಮ ಅಪಾರ ಸೈನ್ಯಬಲವನ್ನು ಉಪಯೋಗಿಸಿ ಅವನನ್ನು ಹತ್ತಿಕ್ಕಲು ಯತ್ನಿಸಿದರು. ಅವನ ಚತುರ ಯುದ್ಧ ತಂತ್ರಗಳಿಂದ ಅವರ ಪ್ರಯತ್ನಗಳು ಸಾಗದೆ ಸಂಪೂರ್ಣ ವಿಫಲವಾದವು. ಕಡೆಗೆ ಅವರು ತಮ್ಮ ಕೈಯಿಂದಲೇ ಅವನಿಗೆ ಕಿರೀಟಧಾರಣೆ ಮಾಡಿ, ಪಶ್ಚಿಮ ಸಮುದ್ರದಿಂದ ಪ್ರೇಹರದ(?)ವರೆಗಿನ ವಿಶಾಲ ಭೂಭಾಗಕ್ಕೆ ಅವನನ್ನು ರಾಜನೆಂದು ಒಪ್ಪಿ, ಸ್ನೇಹಿತನನ್ನಾಗಿ ಮಾಡಿಕೊಂಡರು. ಹೀಗೆ ಕರ್ನಾಟಕದ ಪ್ರಾಚೀನ ಅರಸು ಮನೆತನವೊಂದರ ಆಳ್ವಿಕೆ ಅವನಿಂದ ಆರಂಭವಾಯಿತು.

ಕದಂಬರಾಜ್ಯ ಸ್ಥಾಪನೆಯ ಈ ಹಿನ್ನೆಲೆಯನ್ನು ಶಿವಮೊಗ್ಗ ಜಿಲ್ಲೆಯ ತಾಳಗುಂದದ ಸ್ತಂಭಶಾಸನದಲ್ಲಿ[1] ಅತ್ಯಂತ ಉಜ್ವಲವಾಗಿ ವರ್ಣಿಸಿದೆ. ಮಯೂರನ

---

1 B.L. Rice (Ed.): E.C. VII (1902) ಶಿಕಾರಿಪುರ, 176;
F. Kielhorn(Ed.): E.I. VIII (1905-06), p. 24-36

ಬಗೆಗೆ ಇನ್ನಷ್ಟು ಸಂಗತಿಗಳನ್ನು ಹೇಳುವ ಇನ್ನೊಂದು ಪ್ರಸಿದ್ಧ ಶಾಸನವನ್ನು ಇಲ್ಲಿ ನೋಡಬಹುದು.

ಚಂದ್ರವಳ್ಳಿ ಶಾಸನ: ಕದಂಬರಾಜ್ಯ ಸ್ಥಾಪಕನಾದ ಮಯೂರವರ್ಮನ ದೆಂದು ಸ್ಪಷ್ಟವಾಗಿ ತಿಳಿದಿರುವ ಏಕೈಕ ಶಾಸನ ಚಿತ್ರದುರ್ಗದ ಬಳಿಯ ಚಂದ್ರವಳ್ಳಿ ಶಾಸನ. ಇಲ್ಲಿನ ಹುಲಿಗೊಂದಿ ಭೈರವೇಶ್ವರ (ಸಿದ್ಧೇಶ್ವರ) ದೇವಾಲಯದ ಮುಂದೆ ಗ್ರನೈಟ್ ಬಂಡೆಯಲ್ಲಿ (ಸುಮಾರು ೨೪ ಮೀ. × ೧ ಮೀ. ಹರಹಿನಲ್ಲಿ) ಒರಟು ರೀತಿಯ ಗುಹಾಮಾದರಿಯ ದಾಕ್ಷಿಣಾತ್ಯ ಬ್ರಾಹ್ಮೀಲಿಪಿಯ ಮೂರು ಪಂಕ್ತಿಗಳಲ್ಲಿ ಕೊರೆಯಲಾಗಿರುವ ಇದು, ಕರ್ನಾಟಕದ ಅತ್ಯಂತ ಪ್ರಾಚೀನ ಹಾಗೂ ಮಹತ್ತ್ವದ ಶಾಸನಗಳಲ್ಲಿ ಒಂದು.

ಇದನ್ನು ಬೆಳಕಿಗೆ ತಂದವರು ಖ್ಯಾತ ಪುರಾತತ್ತ್ವ ವಿದ್ವಾಂಸರಾದ ಡಾ|| ಎಂ.ಎಚ್. ಕೃಷ್ಣ ಅವರು. ಛಾಯಾಚಿತ್ರ, ಲಿಪಿಚಿತ್ರಗಳನ್ನು ಕೊಟ್ಟು ವಿಸ್ತಾರ ವಾದ ವಿವರಣೆಯೊಂದಿಗೆ ಅವರು ಇದನ್ನು ೧೯೨೯ರ ಮೈಸೂರು ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿಯಲ್ಲಿ ಪ್ರಕಟಿಸಿದರು.[2] ಇದರ ಕಾಲ ಕ್ರಿ. ಶ. ೨೫೦ರ ಸುತ್ತಿನದೆಂದೂ ಇದರ ಭಾಷೆ ಪ್ರಾಕೃತ ಎಂದೂ ಅವರು ನಿರ್ಧರಿಸಿದರು. ಅವರು ಈ ಶಾಸನದ ಮೂರು ಸಾಲನ್ನು ಓದಿದ್ದು ಹೀಗೆ:

೧. ಕದಂಬಾಣಂ ಮಯೂರ ಶಮ್ಮಣಾ ವಿಣಿಮ್ಮಿಅಂ
೨. ತಟಾಕಂ ದೂಭ ತ್ರೇಕೂಟ ಅಭೀರ ಪಲ್ಲವ ಪಾರಿ
೩. ಯಾತ್ರಿಕ ಸಕಸ್ಥಾ[ಣ] ಸಯಿನ್ದಕ ಪುಣಾಟ ಮೋಕರಿ[ಣಾ]

ಅವರ ಪ್ರಕಾರ ಇದರ ಅರ್ಥ ಹೀಗಿದೆ: "ತ್ರೇಕೂಟ (ತ್ರೈಕೂಟ), ಅಭೀರ (ಆಭೀರ), ಪಲ್ಲವ, ಪಾರಿಯಾತ್ರಿಕ, ಸಕಸ್ಥಾನ (ಶಕಸ್ಥಾನ), ಸಯಿನ್ದಕ (ಸೇಂದ್ರಕ), ಪುಣಾಟ (ಪುನ್ನಾಡು) ಮತ್ತು ಮೋಕರಿ (ಮೌಖರಿ)ಗಳನ್ನು ಸೋಲಿ ಸಿದ ಕದಂಬರ ಮಯೂರಶರ್ಮನಿಂದ (ಈ) ತಟಾಕವು ನಿರ್ಮಿತ(ವಾಯಿತು)". ಹೀಗೆ ಮಯೂರನು ಎಂಟು ರಾಜ್ಯದವರ ಮೇಲೆ ವಿಜಯಸಾಧಿಸಿದನೆಂದೂ ತರುವಾಯದಲ್ಲಿ ಇಲ್ಲಿ ಕೆರೆ ಮಾಡಿಸಿದನೆಂದೂ ಅವರು ನಿಶ್ಚಯಿಸಿದರು. ಈ ಶಾಸನ ದಲ್ಲಿ ಕೆಲವು ಅಕ್ಷರಗಳು, ಕಾಲದ ಪರಿಣಾಮದಿಂದಾಗಿ ಓದಲು ಸ್ವಲ್ಪ ಸಂದಿಗ್ಧ ವೆನಿಸಿದ್ದುದನ್ನು ಅವರು ಪ್ರಸ್ತಾಪಿಸಿದ್ದರೂ ಒಟ್ಟಾರೆ ಈ ಮೇಲಿನ ಪಾಠವನ್ನು ಅವರು ಅಂಗೀಕರಿಸಿದ್ದರು. (ಕದಂಬರಾಜ್ಯವಿಸ್ತಾರದ ನಕ್ಷೆಯೊಂದನ್ನು ಸಹ ಅವರು ಕೊಟ್ಟಿದ್ದಾರೆ.)

---

2 M.H. Krishna (Ed.): 1929ರ MAR (1931), pp. 50–60

ಇದು ಪ್ರಕಟವಾದ ಮೇಲೆ ಕೆಲವು ವಿದ್ವಾಂಸರು, ಅಮೂಲ್ಯ ಶಾಸನವೊಂದನ್ನು ಪ್ರಕಟಿಸಿದ ಸ್ತುತ್ಯಕಾರ್ಯಕ್ಕಾಗಿ ಡಾ|| ಕೃಷ್ಣ ಅವರನ್ನು ಅಭಿನಂದಿಸಿದರಾದರೂ ಇದರ (೧) ಕಾಲದ ಬಗೆಗೆ (೨) ಮಯೂರನ ಜಯಗಳ ಬಗೆಗೆ ಮತ್ತು (೩) ಶಾಸನ ಪಾಠದ ಬಗೆಗೆ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿದರು. ಅವನ್ನು ಹೀಗೆ ಸಂಗ್ರಹಿಸಬಹುದು :

ಇದರ ಕಾಲ ಅಥವಾ ಮಯೂರನ ಕಾಲ ಕ್ರಿ.ಶ. ೨೫೮ ಎನ್ನುವುದು ಸರಿಯಲ್ಲ; ಅದು ಕ್ರಿ.ಶ. ಸುಮಾರು ೨೦೦ ಅಥವಾ ೨೫೦ಕ್ಕೆ ಹಿಂದೆ[3] ; ಕ್ರಿ. ಶ. ಸುಮಾರು ೩೦೦[4] ; ಕ್ರಿ.ಶ. ಸುಮಾರು ೩೪೦[5]—ಇತ್ಯಾದಿಗಳು ಕಾಲವನ್ನು ಕುರಿತ ಅಭಿಪ್ರಾಯಗಳು. ಮಯೂರನ ಜಯಗಳನ್ನು ಕುರಿತವು ಈ ಬಗೆಯವು : ಈ ಶಾಸನ ತಿಳಿಸುವ ಅವನ ಕೆಲವು ಜಯಗಳು ತರುವಾಯದ ಕದಂಬ ಶಾಸನಗಳಿಂದಾಗಲಿ, ಸಮಕಾಲೀನ ಶಾಸನಗಳಿಂದಾಗಲಿ ಸಮರ್ಥಿತವಾಗುವುದಿಲ್ಲ; ಆದುದರಿಂದ ಅವು ಸಂಶಯಾಸ್ಪದ ಎನಿಸುತ್ತವೆ.[6] ಲಿಪಿಯ ಓದಿಕೆಯನ್ನು ಕುರಿತ ಅಭಿಪ್ರಾಯ ಇದ್ದುದು ಹೀಗೆ: ಕೃಷ್ಣ ಅವರು ಕೊಟ್ಟಿರುವ ಲಿಪಿಚಿತ್ರದಲ್ಲಿನ ಕೆಲವು ಅಕ್ಷರಗಳ ರೂಪಕ್ಕೂ ಅವರ ಓದಿಕೆಗೂ ಹೊಂದಿಕೆ ಕಾಣುವುದಿಲ್ಲ; ಅಲ್ಲದೆ ಅದರಲ್ಲಿ ಕೆಲವೆಡೆ ಶಬ್ದರೂಪ ಮತ್ತು ಅವುಗಳ ಅರ್ಥೌಚಿತ್ಯ ಸಹ ಸರಿಯಾದುದಲ್ಲ.

ಕೃಷ್ಣರ ಓದಿಕೆಯ ಬಗೆಗೆ ಹೀಗೆ ಭಿನ್ನಾಭಿಪ್ರಾಯ ತಳೆದ ವಿದ್ವಾಂಸರು, ಅದರ ಸರಿಯಾದ ಪಾಠ ಹೀಗೆ ಹೀಗೆ ಇರಬಹುದು ಎಂದು ತಮತಮಗೆ ತೋರಿದ ರೀತಿಯಲ್ಲಿ ಊಹಿಸಿ ಇಡುತ್ತಾ ಹೋದರು. ಹೀಗಾಗಿ ಇರುವ ಮೂರು ಸಾಲು ಲಿಪಿಗೆ (ಡಾ|| ಕೃಷ್ಣ ಅವರದೂ ಸೇರಿ) ಐದು ಪಾಠಾಂತರಗಳುಂಟಾದುವು. ಈ ಊಹಾಪಾಠಕ್ಕೆ ಅವರುಗಳು ಡಾ|| ಕೃಷ್ಣ ಅವರು ಕೊಟ್ಟಿದ್ದ ಲಿಪಿಚಿತ್ರವನ್ನು

---

3 ಎಂ. ಗೋವಿಂದ ಪೈ : 'ಮೈಸೂರು ಶಾಸನ ಇಲಾಖೆಯ ವರದಿ (೧೯೩೯) ಮತ್ತು ಚಂದ್ರವಳ್ಳಿಯಲ್ಲಿ ನಡೆಸಿದ ಭೂ ಸಂಶೋಧನೆಯ ವೃತ್ತಾಂತ' (ಸಾದರ ಸ್ವೀಕಾರ), ಪ್ರಬುದ್ಧ ಕರ್ಣಾಟಕ, ೧೩–೪, (೧೯೩೨), ಪುಟ ೬–೧೨

4 K. P. Jayaswal — JBORS, Vol. XIX (1933), pp. 220. 221

5 George M. Moraes : Kadamba Kula (1931) ; ೬ನೆಯ ಪುಟದ ಮುಂದಿನ ವಂಶಾವಳಿ ;

P.B. Desai, S. H. Ritti and B. R. Gopal : A History of Karnataka, (II Edn. 1982), p. 81

6 R. Sathianathaier : The Classical Age (1954). p. 272 :

P.B. Desai : Mysore State–1956-66 (1966), p. 15 ;

ಡಾ|| ಎಸ್. ಶ್ರೀಕಂಠಶಾಸ್ತ್ರೀ : 'ಕದಂಬರು', ಕರ್ಣಾಟಕ ಪರಂಪರೆ–ಸಂಪುಟ ೧ (೧೯೭೦), ಪು. ೧೩೩

(ಹಾಗೂ ಅಕ್ಷರಗಳು ಸರಿಯಾಗಿ ಕಾಣದಿದ್ದ) ಛಾಯಾಚಿತ್ರವನ್ನು ಅವಲಂಬಿಸುತ್ತ ಹೋದರೇ ಹೊರತು, ಅವರು ಯಾರೂ ಖುದ್ದಾಗಿ ಬಂದು ಈ ಶಾಸನವನ್ನು ಕಣ್ಣಾರೆ ನೋಡಿ ಪರಿಶೀಲನೆ ಮಾಡಲಿಲ್ಲ.

೧೯೩೨ರಲ್ಲಿ ಖ್ಯಾತ ಕವಿ ಹಾಗೂ ಸಂಶೋಧಕರಾದ ಎಂ. ಗೋವಿಂದ ಪೈ ಅವರು[7], ಈ ಶಾಸನದಲ್ಲಿ ಬರುವ 'ದೂಭ' ಎಂಬುದು ಅರ್ಥೌಚಿತ್ಯ ಹಾಗೂ ಶಬ್ದ ಲಿಪಿ ರೂಪದ ದೃಷ್ಟಿಯಿಂದ ಸರಿಯಾದುದಲ್ಲವೆಂದು ವಿಸ್ತಾರವಾಗಿ ವಿವೇಚಿಸಿ, ಇದು ಮಯೂರನ ಕಾಲದಲ್ಲಿದ್ದ 'ಚುಟು' ಎಂಬ ಒಂದು ರಾಜವಂಶವನ್ನು ಸೂಚಿಸುವ 'ದುಟು' ಶಬ್ದ ಇರಬೇಕು ; ಅಥವಾ 'ದುಷ್ಟ' ಎಂಬ ವಿಶೇಷಣ ಶಬ್ದದ ಪ್ರಾಕೃತ ರೂಪ 'ದುಟ್ಟ' ಇದ್ದಿರಬೇಕು ಎಂದು ಹೇಳುತ್ತ, ಕೃಷ್ಣ ಅವರ ಪಾಠವನ್ನು ಬಹಳಷ್ಟು ಬದಲಾಯಿಸಿ, ಪ್ರಾಕೃತ ಭಾಷೆಯ ಜಾಯಮಾನದ ರೀತ್ಯಾ ಇದನ್ನು ಹೀಗೆ ಓದಬೇಕಾಗಿತ್ತು ಎಂದು ಸೂಚಿಸಿದರು :

೧. ಕಡಂಬಾಣಂ ಮಯೂರ ಶಮ್ಮಣ ವಿಣಿಮ್ಮಿಅಂ
೨. ತಡಾಕಂ ದುಟ್ಟ[ಟು] ತ್ರಕೂಡ ಅಭಿರ ಪಲ್ಲವ ಪುರಿ
೩. ಯೊ[(]ತೀಕ ಸಕಸ್ಥಾಣ ಸಯಿನ್ದಕ ಪುಣಡ ಮೋಕರಿಣ[ಂ]

ಒಟ್ಟಿನಲ್ಲಿ, ಇದರ ಭಾಷೆ ಪ್ರಾಕೃತ ಎಂಬುದನ್ನು ಮತ್ತು ಕೃಷ್ಣ ಅವರು ಕೊಟ್ಟಿದ್ದ ಅರ್ಥವನ್ನು ಇವರು ಅಂಗೀಕರಿಸಿದರು. ಇವರ ಪ್ರಕಾರ ಮಯೂರನು 'ಚುಟು'ಗಳನ್ನು ಗೆದ್ದಿದ್ದ ಎಂದರೆ, ಅಲ್ಲಿಗೆ ಅವನು ಗೆದ್ದ ರಾಜ್ಯದವರ ಸಂಖ್ಯೆ ಒಂಭತ್ತಕ್ಕೆ ಏರಿದಂತಾಯಿತು.

೧೯೩೩ರಲ್ಲಿ ಪ್ರಸಿದ್ಧ ಇತಿಹಾಸ ವಿದ್ವಾಂಸರಾದ ಕಾಶೀಪ್ರಸಾದ್ ಜಯಸ್ವಾಲ್ ಅವರು[8] ಸಹ 'ದೂಭ' ಮತ್ತು ಇತರ ಕೆಲವು ಶಬ್ದ ಮತ್ತು ಅಕ್ಷರಗಳ ಅರ್ಥ ಔಚಿತ್ಯಗಳನ್ನು ಪ್ರಶ್ನಿಸಿ ಶಾಸನಪಾಠವನ್ನು ಇನ್ನಷ್ಟು ಮಾರ್ಪಡಿಸಿದರಲ್ಲದೆ, ಕೃಷ್ಣ ಅವರು ಹೇಳಿದುದಕ್ಕೆ ಸಾಕಷ್ಟು ಭಿನ್ನವಾದ ಅರ್ಥವನ್ನು ಕೊಟ್ಟರು. ಅವರ ಪ್ರಕಾರ ಇದರ ಪಾಠ ಹೀಗಿದೆ:

೧. ಕದಂಬಾಣಂ ಮಯೂರ ಶರ್ಮ್ಮಣಾ [ವಿಣಿಮ್ಮಿ]ತಂ
೨. ತಟೇ[ಂ] ಕಾಞ್ಚೀತ್ರೈಕೂಟಾ ಆಭೀರ ಪಲ್ಲವ[ಪು]ರೀ
೩. [ಯಾತಿ]ಕೇಣ ಸಾತಹನೀಸ್ಥ ಸೇನ್ದ್ರಕ ಪುರಿ ದಮನಕಾರಿ[ಣಾ]

"ಆಭೀರ ಮತ್ತು ಪಲ್ಲವ ರಾಜಧಾನಿಗಳಾದ ತ್ರೈಕೂಟಾ ಮತ್ತು ಕಾಂಚೀಗಳ ಮೇಲೆ ದಾಳಿಯಿಟ್ಟವನೂ ಹಾಗೂ ಸೇಂದ್ರಕ ರಾಜಧಾನಿ ಸಾತಹನೀಯನ್ನು

---

7 ಪ್ರಬುದ್ಧ ಕರ್ನಾಟಕ, ೧೩–೪, ಪು. ೧–೧೨
8 JBORS, Vol. XIX, pp. 220, 221 [Appendix B]

ಮಣಿಸಿದವನೂ ಆದ ಕದಂಬರ ಮಯೂರಶರ್ಮನು ತಟಾಕವನ್ನು ನಿರ್ಮಿಸಿದನು" ಎಂದು ಇದರ ಅರ್ಥ. ಅಂದರೆ ಇಲ್ಲಿ ಮಯೂರನ ಜಯಗಳ ಸಂಖ್ಯೆ ಕಡಿಮೆಯಾಯಿತು ಮತ್ತು ಅವು ವಿಭಿನ್ನವೂ ಆಗಿ ಅರ್ಥೈಸಲ್ಪಟ್ಟುವು. ಪಾಠವನ್ನು ಇಷ್ಟೊಂದು ಮಾರ್ಪಡಿಸಲು, ಅವರು ಡಾ|| ಕೃಷ್ಣ ಅವರು ಪ್ರಕಟಿಸಿದ ಛಾಯಾಚಿತ್ರವನ್ನು ಸಹ ಬಳಸಿಕೊಂಡರು ; ಅಂದರೆ ಭೂತಗನ್ನಡಿಯಿಂದ ಈ ಛಾಯಾಚಿತ್ರವನ್ನು ನೋಡಿ, ಕೆಲವು ಅಕ್ಷರಗಳ ರೂಪವನ್ನು ನಿಶ್ಚಿತಪಡಿಸಿಕೊಂಡುದಾಗಿ ಅವರು ಬರೆದಿದ್ದಾರೆ. ಎಲ್ಲಾ ಅಕ್ಷರಗಳು (ಸರಿಯಾಗಿ) ಕಾಣದಿರುವಂಥ ಹಾಗೂ ಬಂಡೆಯ ಗುಳಿಗೆರೆಗಳು ತುಂಬಿರುವಂಥ ಛಾಯಾಚಿತ್ರವನ್ನು, ಅಕ್ಷರಸ್ವರೂಪ ನಿರ್ಣಯದಂಥ ತಾಂತ್ರಿಕ ವಿಷಯಕ್ಕೆ ಅವಲಂಬಿಸಲು ಸರ್ವಥಾ ಸೂಕ್ತವಲ್ಲದ್ದನ್ನು ಅವರು ಬಳಸಿಕೊಂಡದ್ದು ಸೋಜಿಗದ ಸಂಗತಿ. ಶಾಸನದ ಪಾಠ ಮತ್ತು ಅರ್ಥದ ಬಗೆಗೆ ಅವರಿಗೆ ಭಿನ್ನಾಭಿಪ್ರಾಯವಿದ್ದಂತೆ ಇದರ ಭಾಷೆ ಪ್ರಾಕೃತ ಎಂಬ ಬಗೆಗೆ ಇರಲಿಲ್ಲ.

ತರುವಾಯ ೧೯೬೦ ಮತ್ತು ೧೯೬೧ ರಲ್ಲಿ ಅನುಕ್ರಮವಾಗಿ ಡಾ|| ಎಸ್. ಶ್ರೀಕಂಠಶಾಸ್ತ್ರಿ[9] ಮತ್ತು ಡಾ|| ಪಿ. ಬಿ. ದೇಸಾಯಿ[10] ಅವರುಗಳು 'ದೂಭ' ಶಬ್ದವನ್ನು ಸಂದೇಹಿಸಿ, ಇನ್ನೂ ಕೆಲವು ಶಬ್ದರೂಪಗಳನ್ನು ಸ್ವಲ್ಪ ಮಾರ್ಪಡಿಸಿದರು. ಇದಕ್ಕೆ ಅವರು ವಿಶದವಾದ ವಿವರಣೆಯನ್ನೇನೂ ಕೊಡಲಿಲ್ಲ. ಇಷ್ಟಾದರೂ ಅವರು, ಇದರ ಭಾಷೆ ಪ್ರಾಕೃತ ಎಂಬುದಕ್ಕೆ ಮತ್ತು ಕೃಷ್ಣ ಅವರು ಹೇಳಿದ ಅರ್ಥಕ್ಕೆ ಯಾವುದೇ ಭಿನ್ನಾಭಿಪ್ರಾಯವನ್ನು ತಳೆಯಲಿಲ್ಲ.

ಡಾ|| ಶಾಸ್ತ್ರಿ ಅವರ ಓದಿಕೆ ಹೀಗಿತ್ತು :

೧. ಕದಂಬಾಣಂ ಮಯೂರ ಶಮ್ಮಣ ವಿನಿಮ್ಮಿಅಂ
೨. ತಟಾಕಂ ದುಭ(?) ತ್ರಿಕೂಟ ಅಭಿರ ಪಲ್ಲವ ಪುರಿ
೩. ಯೋತಿಕ ಸಕಸ್ಥಾನ ಸಯಿನ್ದಥ ಪುಣಾಟ ಮೊಕರಿಣ [||]

ಡಾ|| ದೇಸಾಯಿ ಅವರು ಓದಿದ್ದು :

೧. ಕದಂಬಾಣಂ ಮಯೂರ ಶಮ್ಮಣ ವಿನಿಮ್ಮಿಅಂ
೨. ತಟಾಕಂ (ಚುಟ) ತೇಕೂಡ ಅಭಿರ ಪಲ್ಲವ ಪರಿ
೩. ಯಾತಿಕ ಸಕಸ್ಥನ ಸಯಿನ್ದಕ ಪುಣಡ ಪೊಕರಿಣ ||

ಎಂ. ಗೋವಿಂದ ಪೈ, ಕೆ. ಪಿ. ಜಯಸ್ವಾಲ್, ಎಸ್. ಶ್ರೀಕಂಠಶಾಸ್ತ್ರಿ ಮತ್ತು ಪಿ. ಬಿ. ದೇಸಾಯಿ ಅವರುಗಳು, ಮೇಲೆ ಹೇಳಿದಂತೆ ಡಾ|| ಕೃಷ್ಣ ಅವರು ಕೊಟ್ಟಿದ್ದ ಮೂರು ಸಾಲಿನ ಲಿಪಿಗೆ ತಮ್ಮ ಊಹೆಯಂತೆ ತಿದ್ದಿ ಓದಲು ಯತ್ನಿಸಿ

---

9 ಪುರಾತತ್ತ್ವ ಶೋಧನೆ (೧೯೬೦), ಮೈ.ವಿ.ವಿ. ಪ್ರಕಟಣೆ, ಪು. ೩೦೦, ೩೦೧
10 ಕನ್ನಡ ನಾಡಿನ ಶಾಸನಗಳು (೧೯೬೧), ಕ.ವಿ.ವಿ. ಪ್ರಕಟಣೆ, ಪು. ೪೭, ೪೮

ಕದಂಬ ಸಾಮ್ರಾಜ್ಯ
ಕ್ರಿ.ಶ.ಸು. 260

ಡಾ॥ ಎಂ.ಎಚ್. ಕೃಷ್ಣ ಅವರು ಕೊಟ್ಟಿದ್ದ ಕದಂಬ ಸಾಮ್ರಾಜ್ಯದ ನಕ್ಷೆಯ ಪ್ರತಿ

ಮಯೂರವರ್ಮನ ಶಾಸನವಿರುವ ಬಂಡೆ; ಹಿಂದುಗಡೆ, ಮಯೂರನು ಕೆರೆ ಬಲಪಡಿಸಿದ್ದ ಜಾಗದಲ್ಲಿ ಹೊಸದಾಗಿ ನಿರ್ಮಾಣವಾಗಿರುವ ಕೆರೆ

(ಚಿತ್ರ: ಸ್ಟುಡಿಯೋ ಸಂಗೀತ್, ಚಿತ್ರದುರ್ಗ)

ಇನ್ನು ನಾಲ್ಕು ಪಾಠಾಂತರಗಳನ್ನು ಕೊಟ್ಟರು. ಅದರ ಭಾಷೆ ಪ್ರಾಕೃತ ಎಂದೂ ಅದು ಮಯೂರನ (ಕೆಲವು) ಜಯಗಳನ್ನು ಹೇಳುತ್ತದೆ ಎಂದೂ ಅವರೆಲ್ಲ ಒಪ್ಪಿ ಕೊಂಡಿದ್ದರು.

ಶಾಸನದ ಪುನರ್‌ಪರಿಶೀಲನೆ : ಈಚೆಗೆ ಹಲವು ವರ್ಷಗಳಿಂದ ಚಿತ್ರದುರ್ಗ ಪರಿಸರದ ಹೆಚ್ಚಿನ ಶಾಸನಗಳಿಗಾಗಿ ಶೋಧನೆ ಮತ್ತು ಪ್ರಕಟಿತ ಶಾಸನಗಳ ಮರು. ಪರಿಶೀಲನೆ ನಡೆಸುತ್ತಿರುವ ನನಗೆ ಈ ಶಾಸನ ಕುರಿತ ಪಾಠಾಂತರಗಳು ಹಾಗೂ ಅಭಿಪ್ರಾಯಗಳ ವೈವಿಧ್ಯ ಸಹಜವಾಗಿಯೇ ಕುತೂಹಲ ಕೆರಳಿಸಿದುವು. ಬಿ. ಎಲ್. ರೈಸ್ ಮತ್ತು ಡಾ|| ಎಂ. ಎಚ್. ಕೃಷ್ಣ ಮೊದಲಾದವರಿಂದ ಹಿಂದೆ ಪ್ರಕಟ ವಾಗಿದ್ದ ಕೆಲವು ಶಾಸನಗಳ ಓದುವಿಕೆಯಲ್ಲಿ ಘಟಿಸಿದ್ದ ನ್ಯೂನತೆಗಳು ಪ್ರತ್ಯಕ್ಷ ಪರಿಶೀಲನೆಯಲ್ಲಿ ನನಗೆ ಆಗಲೇ ಕಂಡುಬಂದಿದ್ದುವು. ಆದುದರಿಂದ ಈ ಶಾಸನ ವನ್ನು ಸಹ ಪ್ರತ್ಯಕ್ಷವಾಗಿ ಮರುಪರಿಶೀಲಿಸಿ ನೋಡುವುದು ಅತ್ಯಗತ್ಯ ಎನಿಸಿತು. ಇದರ ಲಿಪಿಯನ್ನು ಸಾಕಷ್ಟು ದೀರ್ಘಕಾಲ ಎಚ್ಚರಿಕೆಯಿಂದ ಅಧ್ಯಯನ ಮಾಡಿ ದಾಗ ಕೆಲವು ಅಚ್ಚರಿಯ ಸಂಗತಿಗಳು ಕಂಡುಬಂದವು :

೧. ಬಂಡೆಯಲ್ಲಿದ್ದ ಅಕ್ಷರಗಳಿಗೂ ಕೃಷ್ಣರು ಕೊಟ್ಟಿದ್ದ ಲಿಪಿಚಿತ್ರದ ಅಕ್ಷರ ಗಳಿಗೂ ತಾಳೆ ನೋಡಿದಾಗ, ಹಲವು ಕಡೆ, ವಾಸ್ತವವಾಗಿ ಇದ್ದ ಅಕ್ಷರಗಳು. ಲಿಪಿಚಿತ್ರದ ಅಕ್ಷರಗಳಿಂದ ಭಿನ್ನವಾಗಿದ್ದುವು. ಅಂದರೆ ಶಾಸನದ ಪಾಠ ಅವರ ಪಾಠಕ್ಕೆ (ಅಥವಾ ಉಳಿದವರ ಪಾಠಗಳಿಗೆ) ತುಂಬಾ ಭಿನ್ನವಾಗಿದ್ದಿತು.

೨. ಜತೆಗೆ ಇದರ ಭಾಷೆ ಈ ಮೊದಲಿಗೆ ಎಲ್ಲರೂ ತಿಳಿದಿದ್ದಂತೆ ಪ್ರಾಕೃತ ಅಲ್ಲ, ಸಂಸ್ಕೃತ ಎಂಬುದು ಕಂಡು ಬಂದಿತು.

೩. ಹಾಗೆಯೇ, ಇದರಲ್ಲಿ ಮಯೂರನ ಯಾವ ಜಯಗಳ ಉಲ್ಲೇಖವೂ ಇರಲಿಲ್ಲ ; ಕೇವಲ ಅವನು ಇಲ್ಲಿ ಕೆರೆಯೊಂದನ್ನು ಬಲಪಡಿಸಿದ (ಹಾಗೂ ವನವಾಸದ ನೆಲೆಯೊಂದನ್ನು ಸ್ಥಾಪಿಸಿಕೊಂಡಿದ್ದ) ಸಂಗತಿ ಮಾತ್ರ ಇದ್ದಿತು.

ಡಾ|| ಕೃಷ್ಣ ಅವರ (ಮೂಲ)ಪಾಠ ವ್ಯತ್ಯಾಸಗೊಂಡಿದ್ದುದೇಕೆ ಎಂಬ ಪ್ರಶ್ನೆ ತೀರ ಸಹಜ. ಶಾಸನ ಕೆತ್ತಿರುವ ಬಂಡೆಯ ಪರಿಶೀಲನೆಯಿಂದ ಇದಕ್ಕೆ ಉತ್ತರ ಸ್ಪಷ್ಟ. ಈ ಶಾಸನವಿರುವ ಬಂಡೆಯ ಮೇಲ್ಮೈಯು ಉರುಟುರುಟಾಗಿ ರುವುದರಿಂದ, ನೈಸರ್ಗಿಕ ಗುಳಿಗೆರೆಗಳು ಇದರಲ್ಲಿ ತುಂಬಿರುವುದರಿಂದ, ಕೆಲವೆಡೆ ಕಲ್ಲಿನ ಚಕ್ಕಳ ಎದ್ದಿರುವುದರಿಂದ, ಅಕ್ಷರಗಳ ಕೆತ್ತನೆ ಕೆಲವೆಡೆ ಆಳ ಮಾಡಿಲ್ಲದೆ ಇರುವುದರಿಂದ, ಈ ಶಾಸನದ ಎಲ್ಲ ಅಕ್ಷರಗಳ ಸ್ವರೂಪ ಸ್ಪಷ್ಟವಾಗಿ ಕಾಣುವ ಸಮರ್ಪಕ ಪಡಿಯಚ್ಚು ತೆಗೆಯುವುದು ಸಾಧ್ಯವಾಗುವುದಿಲ್ಲ. ಪಡಿಯಚ್ಚಿನಲ್ಲಿ ಗುಳಿ ಗೆರೆ ಕಚ್ಚುಗಳು ಮೂಡಿಬಂದು ಇರುವ ಅಕ್ಷರ ಒಂದಿದ್ದರೆ, ಮೂಡಿನಿಲ್ಲುವ ಅಕ್ಷರ ಇನ್ನೊಂದಾಗಿ ಭ್ರಮೆಯ ಸುಳಿಗೆ ಸಿಕ್ಕಿಸುತ್ತವೆ. ಇದು ವಾಸ್ತವವಾಗಿ

ಪಡಿಯಚ್ಚು ತೆಗೆಯುವ ಪ್ರಯತ್ನ ಮಾಡಿದಾಗ ಸ್ಪಷ್ಟವಾಯಿತು. ಇಂತಹ ಕಡೆ ಪಡಿಯಚ್ಚನ್ನೆ ನೆಚ್ಚುವುದಕ್ಕಿಂತ ಕಣ್ಣುಮುಟ್ಟ ಪರಿಶೀಲಿಸುವುದು ಅತ್ಯಂತ ಮುಖ್ಯ. ಗುಳಿ, ಗೆರೆ, ಕಚ್ಚು, ಚಕ್ಕಳ ಎದ್ದಿರುವ ಭಾಗ, ಚಾಣದ ಮೊನೆ ಮೂಡಿಸಿದ ಅಕ್ಷರದ ಗುರ್ತು ಆಳವಾಗಿರುವ ಕಡೆ ಹೇಗಿರುತ್ತದೆ, ಆಳವಾಗಿಲ್ಲದ ಕಡೆ ಹೇಗಿರುತ್ತದೆ ಎಂಬುದನ್ನು ಪ್ರತ್ಯಕ್ಷವಾಗಿ ಸಾವಧಾನವಾಗಿ ಪ್ರತ್ಯೇಕಿಸಿ ನಿರ್ಧರಿಸಿಕೊಳ್ಳುವುದು ಇಲ್ಲಿ ಅತ್ಯಾವಶ್ಯಕ. ಪ್ರತ್ಯಕ್ಷ ಪರಿಶೀಲನೆ ನಮಗೆ ಹೆಚ್ಚು ಹೇಳಬಲ್ಲುದು, ಹಾಗೇ ಹೆಚ್ಚು ಕಲಿಸಬಲ್ಲುದು ಕೂಡ.

ಡಾ|| ಕೃಷ್ಣ ಅವರ ಮೂಲಪಾಠ ವ್ಯತ್ಯಾಸಗೊಂಡಿದ್ದುದಕ್ಕೆ ಕಾರಣ, ಅವರು ಇಂಥ ಒರಟು ಮೇಲ್ಮೈಯಲ್ಲಿದ್ದ ಲಿಪಿಯ(ನ್ನು) ಪಡಿಯಚ್ಚು ತೆಗೆದು, ಆದರಲ್ಲಿ ಅಕ್ಷರಗಳನ್ನು ಗುರುತಿಸಲು ಯತ್ನಿಸಿದ್ದು. ಹೀಗಾಗಿ ಬಂಡೆಯ ಉರುಟು, ಗುಳಿಗೆರೆಗಳು ಮೂಡಿನಿಂತ ಪಡಿಯಚ್ಚಿನಲ್ಲಿ ಕೆಲವು ರಾಜ್ಯಗಳ ಹೆಸರು ಇರುವಂತೆ ಅಕ್ಷರದ ಜೋಡಣೆ ಆದದ್ದು ಒಂದು ಸ್ವಾರಸ್ಯಕರ ಆಕಸ್ಮಿಕ. ಅಂತಲೇ ಮಯೂರನ ಕೊರಳಿಗೆ ಅವನು ಗೆಲ್ಲದಿದ್ದ ರಾಜ್ಯಗಳ ಜಯಮಾಲೆ ಬಿದ್ದಿತು; ಕಡೆಗೆ ಅದು ಆರೋಪಕ್ಕೂ ಅವನನ್ನು ಗುರಿಮಾಡಿತು.

ಈಗಿನ ಹೊಸ ವಿವರಣೆ: ಈ ಶಾಸನದ ಲಿಪಿ ಸ್ವರೂಪ, ಅಕ್ಷರ ವಿನ್ಯಾಸದ ತಾಂತ್ರಿಕ ಅಂಶಗಳನ್ನು ಇಲ್ಲಿ ವಿವೇಚಿಸಲಾಗುವುದಿಲ್ಲ. ನನ್ನ ಪುನರ್ ಪರಿಶೀಲನೆಯಲ್ಲಿ ಕಂಡು ಬಂದ ಪಾಠವನ್ನು ಮಾತ್ರ ಇಲ್ಲಿ ನೋಡಬಹುದು:

೧. ಕದಂಬಾಣಂ ಮಯೂರ ವರ್ಮ್ಮಣಾ
೨. ತಟಾಕಂ ದೃಢಂ ಕೃತಂ ಅಭಿರುಪಂ ರ[ಚ]ಯಿತ್ವಾ
೩. ವಾನ[ವಾ]ಸಕಂ ಸ್ಥಾಪಯಿತ್ವಾ ಕುಸಣಚ[ಮೋ]...

ಇದನ್ನು ಓದುತ್ತಿದ್ದಂತೆ ಇದರ ಭಾಷೆ ಸಂಸ್ಕೃತ ಎಂಬುದು ಬಲ್ಲವರಿಗೆ ಸುಲಭವಾಗಿ ಗೋಚರಿಸುತ್ತದೆ. ಎಷ್ಟೋ ಸಂಸ್ಕೃತ ಹಾಗೂ ಮತ್ತಿತರ ಶಾಸನಗಳಲ್ಲಿನಂತೆ ಇದರಲ್ಲೂ ಕೆಲವೆಡೆ ಕಾಗುಣಿತ ದೋಷ ಇವೆ. 'ಕದಂಬಾನಾಂ' ಎಂದು ಬರೆಯಬೇಕಾದುದನ್ನು 'ಕದಂಬಾಣಂ' ಎಂದೂ 'ವರ್ಮ' ಎಂಬುದನ್ನು 'ವರ್ಮ್ಮ' ಎಂದೂ 'ಅಭಿರೂಪಂ' ಎಂಬುದನ್ನು 'ಅಭಿರುಪಂ' ಎಂದೂ ಬರೆಯಲಾಗಿದೆ. 'ವರ್ಮ್ಮಣಾ', 'ದೃಢಂಕೃತಂ', 'ಸ್ಥಾಪಯಿತ್ವಾ' ಮೊದಲಾದ ಶಬ್ದರೂಪಗಳು ಇದರ ಭಾಷೆ ಸಂಸ್ಕೃತ ಎಂದು ನಿರ್ಧರಿಸುವಲ್ಲಿ ಗಮನಾರ್ಹವಾದವು. ಮೂರನೆಯ ಪಂಕ್ತಿಯ ಕಡೆಯಲ್ಲಿ ಕಲ್ಲಿನ ಚಕ್ಕಳ ಎದ್ದು ಹೋಗಿರುವುದರಿಂದ ಆ ಭಾಗದ ಅಕ್ಷರಗಳು ನಿಶ್ಚಿತವಾಗುವಂತಿಲ್ಲ. ಹೀಗಾಗಿ ಅಲ್ಲಿನ ವಾಕ್ಯ ಅಪೂರ್ಣ.

೭

ಈಗ ಈ ಶಾಸನದ ಅರ್ಥ "ಕದಂಬರ ಮಯೂರವರ್ಮನಿಂದ (ಈ) ಕೆರೆಯು ಬಲಪಡಿಸಲ್ಪಟ್ಟಿತು. (ಇದಕ್ಕೆ) ಸುಂದರ ರೂಪವನ್ನು ರಚಿಸಿ, ಕಾಡಿನವಾಸದ ನೆಲೆಯನ್ನು ಸ್ಥಾಪಿಸಿ ಕುಪಣಚಮ......" ಎಂದಾಗುತ್ತದೆ.

ಹೀಗೆ ಈ ಶಾಸನದಲ್ಲಿ, ಕದಂಬರ ಮಯೂರವರ್ಮನು, ಆಗಲೇ ಇದ್ದ ಕೆರೆಯೊಂದನ್ನು ಬಲಪಡಿಸಿದುದನ್ನೂ ಇಲ್ಲಿ ಕಾಡಿನವಾಸದ ನೆಲೆಯೊಂದನ್ನು ಮಾಡಿಕೊಂಡಿದುದನ್ನೂ ಹೇಳಲಾಗಿದೆ. ಇಷ್ಟಲ್ಲದೆ ಅವನ ಜಯಗಳ ಯಾವ ಪ್ರಸ್ತಾಪವೂ ಇದರಲ್ಲಿ ಇಲ್ಲ. ಕಡೆಯಲ್ಲಿ ಬಂದಿರುವ 'ಕುಪಣಚಮ' ಎಂಬ ಮಾತು ವ್ಯಕ್ತಿಯೊಬ್ಬನನ್ನು ಸೂಚಿಸುವಂತಿದೆ. ಕೆರೆಗೆ ಹೊಸರೂಪವನ್ನು ಕೊಟ್ಟ ಮತ್ತು ಕಾಡಿನವಾಸದ ನೆಲೆಯನ್ನು ಮಾಡಿಕೊಟ್ಟ ಒಬ್ಬ ಶಿಲ್ಪಿ ಇವನಿರಬಹುದು.

ಹೊಸ ಸಂಗತಿಗಳು : ಈ ಶಾಸನದ ಮರುಪರಿಶೀಲನೆಯಿಂದ ಹೊಸತಾಗಿ ಕಂಡುಬರುವ ಸಂಗತಿಗಳನ್ನು ಹೀಗೆ ಹೇಳಬಹುದು :

೧. ಈ ಶಾಸನದ ಭಾಷೆ ಇದುವರೆಗೆ ತಿಳಿದಿದ್ದಂತೆ ಪ್ರಾಕೃತ ಅಲ್ಲ, ಸಂಸ್ಕೃತ ; ಅದರಲ್ಲೂ ಪ್ರೌಢಸಂಸ್ಕೃತ ಅಲ್ಲ, ನಿರಾಡಂಬರ ಸರಳ ಸಂಸ್ಕೃತ. ಹೀಗಾಗಿ ಇದರ ಭಾಷೆ ಪ್ರಾಕೃತ ಎಂಬ ಮತ್ತು ಮಯೂರನ[11] ಕಾಲದಲ್ಲಿ ಪ್ರಾಕೃತವೇ ಅಧಿಕೃತ ಹಾಗೂ ಆಡಳಿತ ಭಾಷೆಯಾಗಿತ್ತು ಎಂಬ ಅಭಿಪ್ರಾಯವನ್ನು ಈಗ ಬದಲಾಯಿಸಿ ಕೊಳ್ಳಬೇಕಾಗಿದೆ.

೨. ಕ್ರಿ. ಶ. ೫ನೇ ಶತಮಾನದ ತಾಳಗುಂದದ ಕದಂಬ ಶಾಂತಿವರ್ಮನ ಶಾಸನವೇ ಕರ್ನಾಟಕದಲ್ಲಿ ದೊರೆತಿರುವ ಪ್ರಥಮ ಸಂಸ್ಕೃತ ಶಾಸನ ಎಂದು ಇಲ್ಲಿಯ ವರೆಗೆ ತಿಳಿಯಲಾಗಿತ್ತು.[12] ಈ ತೀರ್ಮಾನವನ್ನು ಈಗ ಕೈಬಿಟ್ಟು, ಈ ಶಾಸನವೇ ಕರ್ನಾಟಕದ ಪ್ರಥಮ ಸಂಸ್ಕೃತ ಶಾಸನವೆಂದು ಸ್ವೀಕರಿಸಬೇಕಾಗುತ್ತದೆ.

೩. ಹಿಂದೆ ಹೇಳಿದ ತಾಳಗುಂದ ಶಾಸನದ ಕವಿ ಕುಬ್ಜನೇ ಕರ್ನಾಟಕದ ಪ್ರಥಮ ಸಂಸ್ಕೃತ ಶಾಸನಕಾರ ಎಂದು ಭಾವಿಸಲಾಗಿತ್ತು.[13] ಆದರೆ ಈಗ ಚಂದ್ರವಳ್ಳಿ ಶಾಸನಕಾರನೇ (ಕುಪಣಚಮ ?) ಕರ್ನಾಟಕದ ಪ್ರಥಮ ಸಂಸ್ಕೃತ ಶಾಸನಕಾರ ಎಂದು ಹೇಳಬೇಕಾಗುತ್ತದೆ.

---

11 ಬಿ.ಎಚ್. ಶ್ರೀಧರ : 'ಕದಂಬ ಮನೆತನ', ಕನ್ನಡ ವಿಶ್ವಕೋಶ, ಸಂಪುಟ ೩ (೧೯೭೧), ಪು. ೬೬೧ ;

ಡಾ॥ ಎಂ. ಚಿದಾನಂದಮೂರ್ತಿ : 'ಚಿಕ್ಕ ಜಾತಿಕಲಹ ಕರ್ನಾಟಕ ಸಂಸ್ಕೃತಿಗೆ ಮೂಲ', ಲಂಕೇಶ್ ಪತ್ರಿಕೆ, ೧೧ ಮಾರ್ಚ್ ೧೯೮೮, ಪು. ೧೦

12 ಮತ್ತು 13 ಡಾ॥ ಎಸ್. ನಾಗರಾಜು : 'ಕದಂಬರ ವಾಸ್ತು, ಶಿಲ್ಪ, ಶಾಸನಗಳು ಮತ್ತು ನಾಣ್ಯಗಳು', ಕನ್ನಡ ವಿಶ್ವಕೋಶ, ಸಂಪುಟ ೩, ಪು. ೬೬೨ ; ಕನ್ನಡ ವಿಷಯ ವಿಶ್ವಕೋಶ–ಕರ್ನಾಟಕ (೧೯೭೯), ಪು. ೧೩೩

೪. ಇದರಲ್ಲಿ ಹಿಂದೆ ಭಾವಿಸಿದ್ದಂತೆ ಮಯೂರನ ಹೆಸರು ಮಯೂರಶರ್ಮ ಎಂದಿಲ್ಲ, ಮಯೂರವರ್ಮ ಎಂದಿದೆ. ಇದರಿಂದ ಈ ಶಾಸನವು, ಅವನು ಪಲ್ಲವ ಕಲಹಾನಂತರ ಬ್ರಾಹ್ಮಣ ಎಂಬುದನ್ನು ಸೂಚಿಸುವ 'ಶರ್ಮ' ಶಬ್ದವನ್ನು ಬಿಟ್ಟು ಕ್ಷತ್ರಿಯ ಸೂಚಕವಾದ 'ವರ್ಮ' ಎಂಬುದನ್ನು ಧರಿಸಿದ್ದುದರ ಕಾಲಾವಧಿಯದು ಎಂದು ಸ್ಪಷ್ಟಪಡುತ್ತದೆ. ಹಾಗೆಯೇ, ಇದರಲ್ಲಿ ಅವನನ್ನು ರಾಜ ಎಂದು ಇನ್ನೂ ಕರೆದಿಲ್ಲ(ಮತ್ತು ಯಾವ ಜಯಗಳ ಪ್ರಸ್ತಾಪವೂ ಇಲ್ಲ)ದುದರಿಂದ ಈ ಶಾಸನ ಅವನು ರಾಜ್ಯಕಟ್ಟುವ ಮುಂಚಿನ ಕಾಲಕ್ಕೆ ಸೇರಿದ್ದು ಎಂದು ಸಹ ಶ್ರುತಪಡುತ್ತದೆ.

೫. ಬ್ರಾಹ್ಮಣ ಅರ್ಥದ 'ಶರ್ಮ' ಎಂಬುದನ್ನು ತ್ಯಜಿಸಿ, ಕ್ಷತ್ರಿಯ ಅರ್ಥದ 'ವರ್ಮ' ಎಂಬುದನ್ನು ಹೆಸರಿಗೆ ಮೊತ್ತಮೊದಲಿಗೆ ಸೇರಿಸಿಕೊಂಡವನು ಮಯೂರನ ಮಗ ಕಂಗವರ್ಮ ಎಂದು ಈವರೆಗೆ ಹೇಳುತ್ತ ಬರಲಾಗಿದೆ.[14] ಆದರೆ ಅದು ಸರಿಯಲ್ಲ. 'ವರ್ಮ' ಎಂಬುದನ್ನು ಧರಿಸಿಕೊಂಡ ಮೊತ್ತಮೊದಲಿಗ ಮಯೂರನೇ ಹೊರತು ಕಂಗವರ್ಮ ಅಲ್ಲ ಎಂದು ಈಗ ಹೇಳಬೇಕಾಗಿದೆ.

೬. ಇಲ್ಲಿಯವರೆಗೆ ಈ ಶಾಸನವು ಮಯೂರನ ಜಯಗಳನ್ನು ಹೇಳುತ್ತದೆ ಎಂದು ಭಾವಿಸಲ್ಪಟ್ಟು, ಇಲ್ಲಿ ಅವನ ಜಯಗಳನ್ನು ಉತ್ಪ್ರೇಕ್ಷಿಸಲಾಗಿದೆ; ಅಷ್ಟು ರಾಜ್ಯದವರನ್ನು ಅವನು ಗೆದ್ದಿದ್ದನೆನ್ನುವುದು ಸಂಶಯಾಸ್ಪದ—ಎಂಬ ಅಭಿಪ್ರಾಯ ಆರೋಪಗಳು ಬಂದಿದ್ದುವು. ಈಗ ಈ ಆರೋಪಗಳಿಂದ ಮಯೂರನು ಮುಕ್ತನಾದ ಎನ್ನಬಹುದು.

೭. ಮಯೂರನು ಇಲ್ಲಿ ವನವಾಸದ ನೆಲೆ ಸ್ಥಾಪಿಸಿಕೊಂಡಿದ್ದನೆಂದು ಹೊರಪಡುವ ಅಂಶ ಬಹಳ ಮುಖ್ಯವಾದದ್ದು. ಈ ಶಾಸನದ ಕಾಲಾವಧಿ ಮಯೂರನು ಇಲ್ಲಿ ಇದ್ದ ಕಾಲಾವಧಿ, ಅದು ಪಲ್ಲವರೊಂದಿಗೆ ಕಲಹವಾದ ಮೇಲೆ ಕ್ಷಾತ್ರಸ್ವೀಕಾರ ಮಾಡಿದನಂತರದ ಹಾಗೂ ತನ್ನದೇ ರಾಜ್ಯಕಟ್ಟಿ ರಾಜ ಎಂದೆನಿಸುವ ಪೂರ್ವದ ಕಾಲಾವಧಿ. ಅವನು ರಾಜ್ಯಕಟ್ಟುವ ಪೂರ್ವದಲ್ಲಿ (ಶ್ರೀಪರ್ವತದ ಬಳಿಯ) ಕಗ್ಗಾಡಿನಲ್ಲಿ ವಾಸಿಸಿದ್ದ ಎನ್ನುವ ತಾಳಗುಂದ ಶಾಸನದ ಹೇಳಿಕೆಯ ಬೆಳಕಿನಲ್ಲಿ ಪ್ರಸ್ತುತ ಶಾಸನದ 'ಕಾಡಿನವಾಸದ ನೆಲೆಯನ್ನು ಸ್ಥಾಪಿಸಿ' ಎಂಬ ಮಾತು ಉಜ್ವಲವಾದ ಅರ್ಥ ಪಡೆಯುತ್ತದೆ. ಅಂದರೆ, ಮಯೂರನು ರಾಜ್ಯಕಟ್ಟುವ ಮುನ್ನ ಯುದ್ಧಸಿದ್ಧತೆಯ ಕಾರ್ಯರಂಗವನ್ನಾಗಿ ಮಾಡಿಕೊಂಡಿದ್ದು—ಗಿರಗಹ್ವರಗಳಿಂದ ತುಂಬಿ ದುರ್ಗಮವೆನಿಸಿದ್ದ—ಇಲ್ಲಿನ ಕಾಡನ್ನೇ ಎಂಬ ಸಂಗತಿ ವ್ಯಕ್ತವಾಗುತ್ತದೆ. [ಹಾಗೆಯೇ, ಸಮೀಪದ ಇಲ್ಲಿನ (ಚಂದ್ರವಳ್ಳಿ) ಪಟ್ಟಣದೊಂದಿಗೆ ಮಯೂರನು ಸಂಪರ್ಕಹೊಂದಿರಬೇಕು].

---

14 JBORS, Vol. XIX, p. 201 ; ಕನ್ನಡ ವಿಶ್ವಕೋಶ, ಸಂಪುಟ ೩ (ಬಿ.ಎಚ್. ಶ್ರೀಧರ ಅವರ ಲೇಖನ) ; ಕನ್ನಡ ವಿಷಯ ವಿಶ್ವಕೋಶ (ಅವರದೇ ಲೇಖನ), ಪು. ೧೩೦ ; ಬಾ. ರಾ. ಗೋಪಾಲ: 'ಮಯೂರಶರ್ಮ', ಕನ್ನಡ ವಿಷಯ ವಿಶ್ವಕೋಶ, ಪು. ೧೧೨೩

೮. ತಾಳಗುಂದದ ಶಾಸನ ಹೇಳುವಂತೆ, ಮಯೂರನು ವಾಸಮಾಡಿಕೊಂಡಿದ್ದ ಕಾಡು ಇದ್ದುದು ಶ್ರೀಪರ್ವತದ ಬಳಿಯಲ್ಲಿ. ಈ ಶ್ರೀಪರ್ವತವು ಶ್ರೀಶೈಲ,[15] ಹಳೇಬೀಡು,[16] ಉಚ್ಚಂಗಿ,[17] ನೀರ್ಕಡಿ,[18] ಮುರಗೋಡು,[19] ಸಿಸಿಲ,[20] ಶೃಂಗೇರಿ[21] ಎಂಬ ವಿವಿಧ ಅಭಿಪ್ರಾಯಗಳು ಇದ್ದುವು. ಆದರೆ ಶ್ರೀಪರ್ವತವು ಈ ಮೇಲಿನ ಯಾವ ಸ್ಥಳವೂ ಆಗಿರದೆ ಇಲ್ಲಿನ ಪ್ರದೇಶದ ಒಂದು ಪರ್ವತಸ್ಥಳವೆ ಎಂದು ತೋರಿಬರುತ್ತದೆ. (ಇದು ಯಾವುದು ಎಂಬುದರ ಬಗೆಗೆ ಪ್ರತ್ಯೇಕವಾದ ಒಂದು ಲೇಖನದಲ್ಲಿ ವಿವೇಚಿಸುವನಿದ್ದೇನೆ).

೯. ಶಾಸನದ ಕೊನೆಯಲ್ಲಿರುವ 'ಕುಪಣಚಮ' ಎಂಬುದು ಒಬ್ಬ ವ್ಯಕ್ತಿಯನ್ನು ಸೂಚಿಸುವಂತಿದೆ. 'ಕುಪಣ' ಎಂಬುದು ಪ್ರಾಚೀನ ಕಾಲದಲ್ಲಿ ಪ್ರಸಿದ್ಧವಾದ, ಕರ್ನಾಟಕದ ಒಂದು ಪಟ್ಟಣ. ಇದು ಈಗಿನ ರಾಯಚೂರು ಜಿಲ್ಲೆಯ ಕೊಪ್ಪಳದ ಹಿಂದಿನ ಒಂದು ಹೆಸರು. ಇದಕ್ಕೆ ಕೊಪಣ, ಕೋಪಣ ಎಂಬ ಹೆಸರಿನ ರೂಪಗಳು ಇದ್ದುವು. ಆದುದರಿಂದ ಇಲ್ಲಿನ 'ಚಮ', ಕುಪಣ ನಗರದಿಂದ ಬಂದಿದ್ದವನೋ ಅಥವಾ ಅಲ್ಲಿಂದ ವಲಸೆ ಬಂದ ಯಾವುದೋ ಒಂದು ಮನೆತನಕ್ಕೆ ಸೇರಿದ್ದವನೋ ಇರಬೇಕು.

೧೦. ಈ ಶಾಸನದ ದಾಕ್ಷಿಣಾತ್ಯ-ಬ್ರಾಹ್ಮೀಲಿಪಿಯಲ್ಲಿ ಔತ್ತರೇಯ ಶೈಲಿಯೂ ಬಳಕೆಯಾಗಿರುವುದು ಒಂದು ವಿಶೇಷ.[22]

[ದಿನಾಂಕ ೧೪–೮–೪೪ರಂದು ಚಿತ್ರದುರ್ಗದಲ್ಲಿ ಜಿಲ್ಲಾ ಇತಿಹಾಸ ಸಂಶೋಧನ ಮಂಡಲಿಯ ಆಶ್ರಯದಲ್ಲಿ ಜರುಗಿದ ಈ ಶಾಸನ ಕುರಿತ ವಿಚಾರ ಸಂಕಿರಣದಲ್ಲಿ ಮಂಡಿಸಿದ ಲೇಖನದ ಪರಿಷ್ಕೃತ ರೂಪ ಇದು. ಈ ಲೇಖನ ರಚಿಸುತ್ತಿರುವಾಗ್ಗೆ ನಾನಾ ರೀತಿಯಲ್ಲಿ ಸಹಕರಿಸಿದ ಹಿತೈಷಿಗಳಿಗೆ ನನ್ನ ಕೃತಜ್ಞತೆಗಳು —ಲೇಖಕ]

---

15 E.C., VII, Introduction—p. 8; E.I., VIII, p. 28 f.

16 M. Govinda Pai: J.I.H., Vol. XII, 1933, Part I to III, p. 358; ಜಯಕರ್ನಾಟಕ, ೧೧–೧, ಪು. ೧೧೪–೦೭

17 Kadamba Kula, pp. 37-38

18 ಲಕ್ಷ್ಮಣ್ ತೆಲಗಾವಿ, ಡಾ॥ ಎಂ.ವಿ. ಶ್ರೀನಿವಾಸ್ (ಸಂ.): ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು (೧೯೭೬), ಪು. ೧೬೧, ೧೬೮

19 ಕನ್ನಡ ವಿಷಯ ವಿಶ್ವಕೋಶ, ಪು. ೧೩೦, ಕಾಲಂ ೧, ಪ್ಯಾರ ೩

20 ಮತ್ತು 21 Dr. K. V. Ramesh: 'Notes on Some Imperial Dynasties of Karnataka', Sri Kanthika (1973) [Prof. S. Srikantha Sastri Felicitation Volume], p. 100, 101

22 ನೋಡಿ: C.I.I., Vol. VIII, p. 1ff., Samudragupta's (Praśasti) Allahabad Inscription (4th Century A.D.); Ibid., Vol. III, pp. 65 ff., Skandagupta's Kahaum Inscription (460 A.D.)

ಕೆಳದಿ ಬಸವರಾಜ ವಿರಚಿತ

# ಕಾಳಿಕಾಕಾಂಡದ ಪ್ರಾರ್ಥನಾ ಪದ್ಯಗಳು

ಸಂಪಾದಕರು

ದೇವರ ಕೊಂಡಾರೆಡ್ಡಿ





ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

ಕೆಳದಿ ಬಸವರಾಜ ವಿರಚಿತ

# ಕಾಳಿಕಾಕಾಂಡದ ಪ್ರಾರ್ಥನಾ ಪದ್ಯಗಳು

ಕೆಳದಿಯ ಅರಸನಾದ ಬಸವರಾಜನು (೧೬೯೭–೧೭೧೪) ಅನುವಾದಿಸಿರುವ ಸಂಸ್ಕೃತದ ಸ್ಕಾಂದಪುರಾಣದ ಕಾಳಿಕಾಕಾಂಡವು ವಾರ್ಧಕ ಷಟ್ಪದಿಯ ಬೃಹದ್ ಗ್ರಂಥವಾಗಿದೆ. ಸುಮಾರು ೧೭೩ ಅಧ್ಯಾಯಗಳನ್ನೊಳಗೊಂಡಿದ್ದು, ೭೧೫೦ ವಾರ್ಧಕ ಷಟ್ಪದಿಗಳನ್ನು ಹೊಂದಿದೆ. ಇನ್ನೂ ಎರಡು ಮೂರು ಸಂಧಿಗಳಷ್ಟು ಭಾಗವು ಶಿಥಿಲವಾಗಿರುವಂತೆ ತೋರುತ್ತದೆ. ಪ್ರತಿಯೊಂದು ಸಂಧಿಯ ಕೊನೆಯಲ್ಲೂ ಕವಿಯ ಸ್ಕಾಂದದೆರಕದ ಸನತ್ಕುಮಾರ ಸಂಹಿತೆಯ ಕಾಳಿಕಾಕಾಂಡ ಎಂದು ಹೇಳಿ, ಭಕ್ತಜನಹಿತಕೋಸುಗವಾಗಿ ಅನುವಾದಿಸಿದುದಾಗಿ ಹೇಳಿಕೊಂಡಿದ್ದಾನೆ.

ಈ ಪ್ರಾರ್ಥನಾ ಪದ್ಯಗಳು ಪ್ರತಿಸಂಧಿಯ ಸೂಚನಾ ಪದ್ಯವಾದ ಅರ್ಧ ವಾರ್ಧಕ ಷಟ್ಪದಿಯಾದ ಮೇಲೆ ಬರುತ್ತವೆ. ಮೊದಲ ೧೩೫ ಸಂಧಿಗಳಲ್ಲಿ ತಪ್ಪದೆ ಬರುತ್ತವೆ. ಸಂಧಿಯ ಪ್ರಾರ್ಥನಾ ಪದ್ಯಕ್ಕೂ ಆ ಸಂಧಿಯ ಕಥೆಗೂ ಯಾವ ಸಂಬಂಧವೂ ಇರದೆ ಕೇವಲ ತನ್ನ ಇಷ್ಟ ದೈವವಾದ ಕೆಳದಿಯ ಭದ್ರಕಾಳಿಯನ್ನು ಕುರಿತು ರಚಿಸಿರುವ ಪ್ರಾರ್ಥನಾ ಪದ್ಯಗಳಾಗಿವೆ.

ಸಂಸ್ಕೃತದ ದೇವೀಸ್ತೋತ್ರ ಸಾಹಿತ್ಯವನ್ನೇ ಅವಲಂಬಿಸಿ ಅದರ ಆಧಾರದ ಮೇಲೆ ವಾರ್ಧಕ ಷಟ್ಪದಿಗಳನ್ನು ರಚಿಸಿದ್ದರೂ ಬಿಡಿಬಿಡಿಯಾದ ಪದ್ಯಗಳನ್ನೆಲ್ಲಾ ಒಂದೆಡೆ ಸೇರಿಸಿದಾಗ ಒಂದು ಸುಂದರ ಸ್ತೋತ್ರಸಾಹಿತ್ಯವಾಗುವುದರಲ್ಲಿ ಸಂದೇಹ ವಿಲ್ಲ. ಈ ಪದ್ಯಗಳಲ್ಲಿಯೇ ಕವಿಯ ಸಾಮರ್ಥ್ಯವನ್ನು ನಾವು ಅಳೆಯಬಹುದು. ಕಠಿಣವಾದ ಸಂಸ್ಕೃತ ಪದಗಳನ್ನು ಬಳಸಿ ಷಟ್ಪದಿಯನ್ನು ರಚಿಸಿದಂತೆಯೇ ಬರೀ ಕನ್ನಡ ಪದಗಳನ್ನೇ ಬಳಸಿಯೂ ಈತ ಪದ್ಯಗಳನ್ನು ರಚಿಸಬಲ್ಲ (ಪದ್ಯ ೯೮). ಹಾಗೆಯೇ ಬರೀ ಲಘು ಮಾತ್ರೆಗಳನ್ನು ಬಳಸಿ ಪದ್ಯ ರಚಿಸಬಲ್ಲ (ಪದ್ಯ ೩೪). ಪ್ರತಿಭಾವಂತನಾದ ಈ ಕವಿ ಭಾವಾವಿಷ್ಟನಾಗಿ ತನ್ನ ಇಷ್ಟದೈವವನ್ನು ಮನದುಂಬಿ

ಸ್ತುತಿಸಿರುತ್ತಾನೆ. ತನ್ನ ತಾಯಿ ಚೆನ್ನಾಜಿಗೂ ಈ ಭದ್ರಕಾಳಿಗೂ ಅಭೇದ ಕಲ್ಪಿಸಿರುತ್ತಾನೆ (ಪದ್ಯ ೧೧೬). ಪ್ರತಿ ಪದ್ಯದ ಕೊನೆಯ ಸಾಲಿನಲ್ಲಿ 'ಕೆಳದೀ ಪುರಾವಾಸೆ', 'ಕೆಳದೀಶಿ ಕಾಳಿ' ಮುಂತಾದ ಪದಪುಂಜಗಳನ್ನು ಬಳಸಿರುತ್ತಾನೆ.

ಕೆಳದಿಯ ಅರಸನಾದ ಬಸವರಾಜನು ಸಂಸ್ಕೃತದಲ್ಲಿ 'ಶಿವತತ್ತ್ವ ರತ್ನಾಕರ', 'ಸುರದ್ರುಮ' ಎಂಬ ಗ್ರಂಥಗಳನ್ನೂ ಕನ್ನಡದಲ್ಲಿ 'ಸೂಕ್ತಿಸುಧಾಕರ' ಎಂಬ ಗ್ರಂಥವನ್ನೂ ಬರೆದಿರುವುದಾಗಿ ತಿಳಿದುಬಂದಿದೆ. 'ಕೆಳದಿನೃಪವಿಜಯ'ದಲ್ಲಿಯೂ ಈ ಗ್ರಂಥದ ಹೆಸರಿನ ಉಲ್ಲೇಖವಿಲ್ಲ. ಹೀಗಾಗಿ ಇದುವರೆಗೆ ಬಸವರಾಜನ ಈ ಕೃತಿಯ ಹೆಸರೇ ತಿಳಿದಿರಲಿಲ್ಲ.

ಈತ ವೀರಶೈವ ಧರ್ಮದವನು. ತಾನು ಸೋಮಶೇಖರ–ಚೆನ್ನಾಂಬಿಕೆಯರ ಸುತನೆಂದೂ ಹೇಳಿಕೊಂಡಿದ್ದಾನೆ. ಈ ಗ್ರಂಥದಲ್ಲಿ ಪೂರ್ವಕಾಂಡ ಮತ್ತು ಉತ್ತರ ಕಾಂಡಗಳೆಂಬ ಎರಡು ಭಾಗಗಳಿದ್ದು, ಮೊದಲ ಭಾಗದಲ್ಲಿ ಹರನ ಭಿಕ್ಷಾಟನೆ, ಹಿರಣ್ಯಾಕ್ಷ, ಅಂಧಕಾಸುರ ಸಂಹಾರ, ಶುಂಭ–ನಿಶುಂಭರ ಸಂಹಾರ ಮುಂತಾದ ವಿವರಗಳಿವೆ. ಉತ್ತರ ಭಾಗದಲ್ಲಿ ಕೊಡಚಾದ್ರಿಯ ವರ್ಣನೆ, ಅಲ್ಲಿಯ ತೀರ್ಥಗಳ, ಕ್ಷೇತ್ರಗಳ ಮಹಿಮೆಯ ವರ್ಣನೆಯಿದೆ.

ಇಂತಹ ಬೃಹತ್ ಗ್ರಂಥದ ಪ್ರಾರ್ಥನಾ ಪದ್ಯಗಳನ್ನು ಒಂದೆಡೆ ಸಂಗ್ರಹಿಸಿ ಇಲ್ಲಿ ಕೊಟ್ಟಿದ್ದೇನೆ.

## ಕಾಳಿಕಾಕಾಂಡದ ಪ್ರಾರ್ಥನಾ ಪದ್ಯಗಳು

ಸರ್ವಮಂಗಳೆ ಸದಾಶಿವೆ ಶಾಂಭವೀಶಾನಿ
ನಿರ್ವಾಣರೂಪಿಣಿ ಬ್ರಹ್ಮಾಂಡ ಪಾಲಿನೀ
ಶರ್ವಾಣಿ ಸಚ್ಚಿದಾನಂದವಿಗ್ರಹೆ ಪರಾತ್ಪರೆ ಪರಂಜ್ಯೋತಿ ಪರಮೇ ||
ಗೀರ್ವಾಣ ಪೂಜಿತ ಪದಾಬ್ಜೆ ಭಕ್ತಾಶ್ರಯಾಂ
ಶರ್ವ ×× ಗಿರಿರಾಜ ಮೇನಕಾ ವರಧಾತ್ರಿ
ಸರ್ವಗಾಮಿನಿ ಸಹ್ಯ ಕೆಳದೀಪುರಾವಾಸೆ ಜಯ ಭದ್ರಕಾಳಿಕಾಳೀ || ೧ ||

×××× [ಜಂ] ಭಾರಿನುತಗಾಥೆ
ಜಯಜಯ ಜನಾನಂದೆ ಜನಕ ಜನನೀ ತಂದೆ
ಜಯಜಯ ಜಲಾನಂದೆ ಜಲಚರ ಸ್ತುತಿವೃಂದೆ ಜಂಗಮ ಮನೋರವಿಂದೇ ||
ಜಯಜಯ ಮಹಾಮಾಯೆ ಮರ್ತ್ಯದುರಿಪಾಯೆ
ಜಯಜಯ ಜರಾದೂರೆ ××× [ಕಾರೆ]
× × × × × × × × × × || ೨ ||

ಶರಣು ಭಾಜಕತಾಯಿ ಶರಣು ಪೂಜಕರಾಯಿ
ಶರಣು ಕರುಣಾಪಾಂಗಿ ಶರಣು ಭರಿತಾನಂಗಿ
ಶರಣು ವರದಾಯಿನೀ ಶರಣು ಪರಕಾಯಿನೀ ಮಾಯೆ ಸರ್ವೇಶಜಾಯೇ ||
ಶರಣು ವೇಕೋದಾರೆ [ಶರಣು] ×××
[ಶರಣು] ×××××××
××××× ಶರಣು ಸಿದ್ಧಾಂತಪುರೀ ಸಹ್ಯ ಕೆಳದೀ ಪುರೇಂಧ್ರೀ || ೪ ||

ಶಿವಭಕ್ತಿ ಶಿವಶಕ್ತಿ ಶಿವರಕ್ತಿ ಶಿವಮುಕ್ತಿ
ಶಿವದಾನೆ ಶಿವಪಾನೆ ಶಿವಮಾನೆ ಶಿವತಾನೆ
ಶಿವಮಾತ್ರೆ ಶಿವಗಾತ್ರೆ ಶಿವನೇತ್ರೆ ಶಿವಪಾತ್ರೆ ಶಿವಚೈತ್ರೆ ಶಿವಕಳತ್ರೇ ||
ಶಿವಪೂರ್ತಿ ಶಿವಜೂರ್ತಿ ಶಿವಮೂರ್ತಿ ಶಿವಕೀರ್ತಿ
ಶಿವಸಾರೆ ಶಿವಭಾರೆ ಶಿವಪಾರೆ ಶಿವಪೂರೆ
ಶಿವಗಂಗೆ ಶಿವಲಿಂಗೆ ಶಿವಸಂಗೆ ಶಿವರಂಗೆ ಕೆಳದೀಶ ಕಾಳಿ ಪಾಹೀ || ೫ ||

ಪಾಹಿ ಯೋಗಾಂಭೋಶಿ ಪಾಹಿಭೋಗವಿಕಾಶಿ
ಪಾಹಿ ರವಿಶಶಿನೇತ್ರೆ ಪಾಹಿ ಶಿವಸುಖಮಾತ್ರೆ
ಪಾಹಿ ಜಂಗಮ ಗಾತ್ರೆ ಪಾಹಿ ಲಿಂಗಕ್ಷೇತ್ರೆ ಪಾಹಿ ಜಗದಾಯಿ ತಾಯೀ ||
ಪಾಹಿ ಧರ್ಮ ವಿಹಾರೆ ಪಾಹಿ ಶರ್ಮಾಕಾರೆ
ಪಾಹಿ ವೇದಾತೀತೆ ಪಾಹಿ ಭೇದಖ್ಯಾತೆ
ಪಾಹಿ ಸಸ್ಮಿತವದನೆ ಪಾಹಿ ವಿಸ್ಮಿತಕದನೆ ಸಹ್ಯಾಕೆಳದಿನಿವಾಸೀ || ೬ ||

ಸರ್ವಮಂಗಳೆ ಸಚ್ಚಿದಾನಂದ ಪರಿಪೂರ್ಣೆ
ನಿರ್ವಾಣದಾಯಿನಿ ನಿರಾಧಾರಿ ನಿಶ್ಶಂಕೆ
ಗೀರ್ವಾಣನಾರೀ ಶಿರೋಮಂಡಿತ ಪದಾಬ್ಜೆ ಯೋಗಿನೀ ಜೋಗಳಾಂಬೆ ||
ಸರ್ವಜೀವಾಂಗ ಸ್ವರೂಪಿಣಿ ಬ್ರಹ್ಮಾಣಿ
ಸರ್ವಗಾಮಿನಿ ವಿಶ್ವತೋಮೂರ್ತಿ ಚಿತ್ಕೀರ್ತಿ
ಸರ್ವವಿದ್ಯಾಂಗಿ ಸಹ್ಯಾದ್ರಿ ಕೆಳದೀಪುರ ಶ್ರೀಭದ್ರಕಾಳಿ ಶರಣೂ || ೭ ||

ಧರೆ × ——— × ——— ×
× ——— × ——— ×
×× ನೀಶಾನಿ ಕಾಮಾಕ್ಷಿ [ದೃತ್ಯೈಕ್ಷಿ] ಭೂಮಿಬಿಲಕಾಮೇಶ್ವರಿ ||
ನರಸುರೋರಗ ಮನೋವರ್ಕ್ಕಮೂರ್ತಿ ಭಕ್ತಜನ
ಸುರಭೂಜೆ ಮೇಖಲಾ ವಿಂಧ್ಯಾಗ ನಂದನೇ
ಪರಮ ಸಹ್ಯಾದ್ರಿ ಕೆಳದೀಪುರನಿವಾಸಿನೀ ಭದ್ರಕಾಳೀಶ್ವರೀ ಜಯಾ || ೮ ||

ಗಂಗಾ ಭವಾನೀ ಸಪತ್ನೀ ಮಹೇಶ್ವರಾ
ರ್ಧಾಂಗ ಭೂಷಣಮೂರ್ತಿ ಭಕ್ತಾಶಯಾಂಭೋಜ
ಭೃಂಗಿ ನಿಖಿಲಾಂಡನಾಯಕಿ ಸುರಾಸುರಾಹವ ಮ × × × × ||
× ——— × ——— ×
× ——— × ——— ×
× ——— × ——— × ——— × ——— × || ೯ ||

ದಿತದನುಜೆ ಸುತಮನುಜೆ ಮಣಿಮಕುಟಿ ಭಣಶಕಟಿ
ಧೃತವೀಣೆ ಚಿತಬಾಣೆ ಪರಮೇಶಿ [ಬೆಂಕಾಶಿ]
ಶೃತ × ——— × ——— × ——— × ——— × ||
× ——— × ——— × ——— ×
× ——— × ——— × ——— ×
× ——— × ಶಿವಗಂಗೆ ಭವಭಂಗೆ ತತನಾದೆ × ——— × || ೧೦ ||

× —— × —— [ಮಾದೆ ಕಾ]ಂತಾಜನ ವಿನೋದೆ
ಕಿರಿವಿಷ್ಣುನುತಪಾದೆ ಕೀಲಿತಾಜಾಂಡಾದೆ
ಕುರರಾಸುರಾಸ್ಪಾದೆ ಕೂರ್ಮಪೀಠಾಹ್ಲಾದೆ ಕೃತಕೃತ್ಯೆ ಕ್ರೂರಭೃತ್ಯೇ ||
ಶರಣ ಕೇವಲರೂಪೆ ಶಾಂತಕೈವಲ್ಯಾಪೆ
ಸರಸ ಕೋಪಾಟೋಪೆ ಸಾರಕಾಪೀನಾಪೆ
ಕರಕಂಕಣ ವಿಲಾಸೆ ಕಸ್ತೂರಿಕಾವಾಸೆ ಕಿಳದೀಶಿ ಕಾಳಿ ಶರಣೂ || ೧೧ ||

ಗಣರಾಜಮಾತೆ ಗಾಂಗೇಯು ನಟನೋಪೇತೆ
ಭಣಿತಗುರುಮಂತ್ರಾರ್ಥೆ ಗೂಡತಂತ್ರ ಶಿರೋರ್ಥೆ
ಅಣಿಮಾದಿ ಸಿದ್ಧ್ಯಾಯಿ ಯಾಮಳವ್ರತ ತಾಯಿ ಕಾರುಣ್ಯ ಶೀಲೆ ಲೋಲೇ ||
ಪ್ರಣವಸ್ವರೂಪಿಣಿ ಪ್ರತ್ಯಕ್ಷರೂಪಿಣೀ
ಕಣಿತವೇದ ಶಿರಸ್ಕೆ ರಣಿತ ತಂತ್ರ ಮನಸ್ಕೆ
ಝಣಿತ ಭೂಷಣಗಾತ್ರೆ ಫಣಿತದೈತ್ಯಸ್ತೋತ್ರೆ ಕಿಳದೀಶಿ ಕಾಳಿ ಪಾಹಿ || ೧೨ ||

ಸ್ಯಂದನೀಕೃತಸಿಂಹೆ ಮಂದೇಹ ರಣರಂಹೆ
ಕಂದರ್ಪ ವರಪಾಣಿ ಮಂದಾರ ಸುಮವೇಣಿ
ಯಿಂದು ಮಂಡಲವದನೆ ಕುಂದ ಕೋರಕ ರದನೆ ಸುಂದೋಪಸುಂದಕದನೇ ||
ಸ್ಕಂದಿತಾಸುರಟೋಪೆ ವೃಂದಾರಕಾಲಾಪೆ
ಸಿಂಧೂರ ಸುಮಮೋದೆ ಮಂದರಾಗಾಹ್ಲಾದೆ
ಮಂದಸ್ಮಿತ ವಿಲಾಸೆ ವಂದಕಮನೋವಾಸೆ ಕಿಳದೀಶಿ ಕಾಳಿ ಪಾಹಿ || ೧೩ ||

ಅಂಕಿತ ಪದಾಂಕುರಾಲಕ್ತ ಶಂಕರಭಾಲೆ
ಹೂಂಕಾರತರ್ಜಿತಾಶೇಷ ದಾನವ ಶೀಲೆ
ಶಂಕರಾರ್ಧಾಂಗ ಮಂದಿರಪಾಲೆ ದೈತ್ಯದಾನವರುಂಡ ಕಂಠಮಾಲೆ ||
ಓಂಕಾರಮಂತ್ರಾಬ್ಜ ಪೀಠಮಂದಿರ ಲೀಲೆ
ಪಂಕಜಾಸನ ಪಂಕಜಾಕ್ಷಸನ್ನುತಿ ಲೋಲೆ
ಹ್ರೀಂಕಾರ ಮಂತ್ರಾಲವಾಲೆ ಕಿಳದೀಜಾಲೆ ಜಯಭದ್ರಕಾಳಿ ನೀಲೇ || ೧೪ ||

ಸಿಂಧದಾನವಹಂತ್ರಿ ಸಿದ್ಧವಿದ್ಯಾತಂತ್ರಿ
ಬಂಧುಜನಕಾರುಣ್ಯೆ ಭಕ್ತಪಾಲನಪುಣ್ಯೆ
ದಂಧನೋಜ್ಝಿತಕಾಯೆ ದಕ್ಷಾಧ್ವರಾಪಾಯೆ ನುತನಾಕೆ ಧೃತಪಿನಾಕೇ ||
ಸಿಂಧುರಾಜಿನ ಚೀರೆ ಸಿಂಹವಾಹನ ಧೀರೆ
ಕಂಧರಾಯತ ವೇದೆ ಕರವೀರ ಸುಮಮೋದೆ
ಬಂಧಮೋಕ್ಷಾಭಾಸೆ ಬಹಳಲೋಕಾವಾಸೆ ಕಿಳದೀಶಿ ಕಾಳಿ ಶರಣೂ || ೧೫ ||

ಸ್ವರ್ಲೋಕಪಾಲಕ ಕಿರೀಟಮಾಣಿಕ್ಯ ರೋ
ಚಿರ್ಲಾಲಿತಾಂಘ್ರಿಯುಗೆ ನಿಜಸೇವಕಾಶಯಾಂ
ತರ್ಲಾಸಮಾನೆ ದಾನವಮದಾಹವ ಭಾಷ್ಯಮಾಣ ಶಕ್ತಿ ವಿಲಾಸಿನೀ ||
ನಿರ್ಲಕ್ಷ್ಯಮಾಣೆ ನಿಗಮಾಗಮ ಪುರಾಣಾರ್ಥ
ದುರ್ಲಭ್ಯಮಾನೆ ವಿಜ್ಞಾನ ಕೇವಲ ಜನಾ
ವಿರ್ಲಸನೆ ಸಹ್ಯ ಕಿಳದೀನಗರವಾಸಿನೀ ಭದ್ರಕಾಳಿ ಜಯಜಯಾ || ೧೬ ||

[೧೭ ಮತ್ತು ೧೮ನೇ ಸಂಧಿಯ ಪದ್ಯಗಳು ದೊರೆತಿಲ್ಲ]

ಆಕಾಶಕೇಶಿ ಭುಕ್ತಾತಕಾಂಕ್ಷೆ ಸರ್ವಜೀ
ವೌಕಸೆ ಸುರಸ್ತುತ ಶ್ಲೋಕೆ ಕಾಲಕ್ರಮಾ
ನೀಕೆ ಸಂಹಾರ ಕಾಲಾಕಾರೆ ಗೌರೀತನೂಕೋಶೆ ಚಿತ್ಪ್ರಕಾಶೇ ||
ಮೂಕ ಮಂತ್ರಪ್ರೀತೆ ಕಾಕಾಹವಾಪೇತೆ
ಸಾಕಾರದೇಹೆ ವಿಗತಾಕಾರ ನಿರ್ವಾಹೆ
ಕಾಕುಗೋಷ್ಠೀದೂರೆ ನೈಕಕಾಷ್ಠಾಪಾರೆ ಕಿಳದೀಶಿ ಕಾಳಿ ಶರಣೂ || ೧೯ ||

ಕಾಮಿನೀಗಣಸಂಗೆ ಕಾಮಬಾಣಾಪಾಂಗೆ
ಭೀಮಕಂದರಗೇಹೆ ಸಾಮಗಾನೋ ಪೋಹೆ
ಸೀಮಂತಿನೀದೇವಿ ಸಾಮಾರ್ಚನಾ ಜೀವಿ ನಾಮರೂಪಾನುಭಾವಿ ||
ಕಾಮಿಕಾದ್ಯಾಗಮ ಸ್ತೋಮ ವಿನುತಾಗಮ
ವ್ಯೋಮಾಚಲಾಪಾಣಿ ರಾಮವಾಂ ರಾವಾಣಿ- ?
ಭೂಮಿಧರವರಪುತ್ರಿ ಸೋಮಶೇಖರನೇತ್ರಿ ಕಿಳದೀಶಿ ಕಾಳಿ ಶರಣೂ || ೨೦ ||

ಸಂಧ್ಯಾಂಗನಾ ಸಹೋದರಿ ವೇಲದಾನವಾ
ಸಂಧ್ಯಾನಲಾಲಸಚ್ಛನ್ನಕೇಶಿನಿ ನತಾ
ವಂಧ್ಯ ಫಲಧಾತ್ರಿ ಗುಡ್ಡಾದದೈತ್ಯಾಂತಕೀ ಭಿಲ್ಲ ಸಾಗರಮರ್ದ್ದಿನೀ ||
ವಿಂಧ್ಯವಾಸಿನಿ ವಿಶ್ವತೋಮುಖಿ ಶಿವಾರ್ಚನಾ
ಸಂಧ್ಯಾಯತಾಕ್ಷಿ ಕೌಶಿಕಿ ರಣಾಟನ ವೃಷಭಿ
ಸಂಧ್ಯಾಯಮಾನ ವೇದಾಗಮ ಪುರಾಣಾಂತೆ ಕಿಳದೀಶಿ ಕಾಳಿ ಶರಣೂ ||೨೧||

ಷಣ್ಮುಖೀಜನಕಿ ಷಟ್ಸ್ಥಲ ಭಾಜಕಾಶಯ ವಿ
ರಾಣ್ಮೂರ್ತಿ ದೇವದಾನವ ರಣಾರ್ಭಟಲೀಲೆ
ಋಣ್ಮಾನಿನೀಸಂಘ ಸೇವಿತ ಪದಾಂಭೋಜೆ ಶಿವೆ ಸದಾಶಿವೆ ಶಂಕರೀ ||

ದ್ವಿಣ್ಮಹಿಷಮರ್ದಿನೀ ರಕ್ತಬೀಜಾಂತಕಿ ಹಿ
ರಣ್ಮಯಶರೀರಿ ಚಂಡಘ್ನಿ ಮುಂಡಘ್ನಿ ವಿ
ಭ್ರಾಣ್ಮಯಿ ಮಾತಂಗಿ ಸಹ್ಯಕಿಳದೀನಗರದೇವಿ ಭದ್ರಕಾಳೀ ॥ ೨೨ ॥

ಅಕ್ಷಯಶರೀರಿ ಭಾಳಾಕ್ಷಿ ದೈತ್ಯಾಹವಾ
ಪೇಕ್ಷೆ ಮಂಗಳಗೌರಿ ಸಾಕ್ಷಾನ್ಮಹಾದೇವಿ
ದಕ್ಷ ಶತರೂಪಾಸಯಕ್ಷೇಮಕರಿ ವಿರೂಪಾಕ್ಷ ದಾನವ ಭಂಜಿನೀ ॥
ಉಕ್ಷವಾಹನಮಾನಸಕ್ಷೇತ್ರಚರಿ ಸಹ
ಸ್ರಾಕ್ಷ ಸೋದರಿ ವಾರಿಜಾಕ್ಷಭಗಿನಿ ಮಹೇಶ್ವ
ರಿ ಕ್ಷಾರನಾಶಿ ಕಿಳದೀಕ್ಷ್ಮಾ ವಿನೋದಿನೀ ರಕ್ಷ ಮಾಂ ಭದ್ರಕಾಳೀ ॥ ೨೩ ॥

ದಂಭೋಳಿಕರನುತ ಪಾದಾಂಭೋಜಯುಗಳೆ ವಿ
ಶ್ವಂಭರಾಸ್ಯಂದನೆ ನಿಕುಂಭಪಾತನಲೀಲೆ
ಶುಂಭನಾಶಿನಿ ಮಹಾಕುಂಭಕೋಣಾಂತಕಿ ನಿಕುಂಭದಾನವಭಂಜಿನೀ ॥
ಕುಂಭಿಮದಹಂತ್ರಿ ದೈತ್ಯಾಂಭೋಧಿ ಬಡಬೆ ನತ
ಕುಂಭಸಂಭವೆ ವರದೆ ರಂಭಾನಟನಲೋಲೆ
ಜೃಂಭಿತಾಸುರಮಾರಿ ಜಂಭಾರಿಸೋದರೀ ಕಿಳದೀಶಿ ಕಾಳಿ ಶರಣೂ ॥ ೨೪ ॥

ಭೂವ್ಯೋಮ ಪಾತಾಳನಾಯಕಿ ಮಹಾಮಾರಿ
ದಿವ್ಯ ಸಿಂಹಾರೂಢೆ ದೈತ್ಯಸಂಹಾರಿಣೀ
ಹವ್ಯವಾಹನನೇತ್ರೆ ದಾನವಾಹವಹಂತ್ರಿ ವಿಂಧ್ಯಪರ್ವತವಾಸಿನೀ ॥
ಭವ್ಯಮೂರ್ತಿ ಭವಾನಿ ಭಕ್ತಾಬ್ಜಮಾರ್ತಾಂಡಿ
ನವ್ಯಮಹಿಮೋದಯೆ ನಗೇಂದ್ರವರದಾಯಿನೀ
ಸೇವ್ಯ ಸಹ್ಯಾದ್ರಿ ಕಿಳದೀ ನಗರವಾಸಿನೀ ಭದ್ರಕಾಳೀಶ್ವರಿ ಜಯಾ ॥ ೨೫ ॥

ಅಂಕಾಲಿ ಮುಖ್ಯವಿನುತಾಂಕೋತ್ಸವಾಶಯೆ ನಿ
ರಂಕುಶೆ ನಿರಂಜನೆ ಶಶಾಂಕಾರ್ಧಶೇಖರಿ ದ
ಯಾಂಕುರೆ ಸದಾಭಕ್ತಪಂಕಜವಿಕಾಶಾರ್ಕೆ ಕುಂಕುಮಾದ್ರಾಂಬರಾಂಗೀ ॥
ಕಂಕಘ್ನಿ ದಾನವಾಹಂಕಾರಭಂಜಿನಿ ಭ
ಯಂಕರಶರೀರೆ ನಿಶ್ಶಂಕೆ ಸರ್ವಾಮರಾ
ತಂಕಪರಿಹಾರಿಣೀಯೋಂಕಾರೆ ಕಿಳದೀಪುರಾಂಕಿ ಜಯಭದ್ರಕಾಳೀ ॥ ೨೬ ॥

ದೂರೀಕೃತಾಸುರ ನಿವಾರೆ ಕರುಣಾಸುಧಾ
ಪೂರೆ ಕರವೀರಸುಮಧಾರೆ ವಿಂಧ್ಯಾಚಲಾ
ಪಾರದರದಾಯಕಿ ಮಹಾರಜತಕಾಂತಿಮಯಿ ಮೇರುಕೋದಂಡಪಾಣೀ ॥

ನಾರಾಯಣಾಸ್ತ್ರೀ ಲಕ್ಷ್ಮೀರಮಣಸೋದರೀ
ಭಾರತೀನುತಾ ಗುಣ ಚಾರಿತ್ರೆ ಸರ್ವಲೋ
ಕಾರಾಧ್ಯೆ ಸಹ್ಯ ಕಿಳದಿ[ೀ]ರಿಣಿ ಮಹಾಮಾರಿ
ಜಯಜ[ಯಾ]ಭದ್ರಕಾಳೀ ॥ ೨೭ ॥

ಮಾಯಾಸುರಗ್ನಿಯಾಮ್ನಾಯಾಂತ ವೇದಿನಿ ಚಿ
ದಾಯಿನಿ ನತಾಭೀಷ್ಟದಾಯಿನಿ ನಿಕೃತ್ತ ದೈ
ತೇಯಿ ಶಂಕರಪಟ ಜಾಯೆ ನಿಷ್ಕಳೆ ಮಹಾಮಾಯೆ ಪರಮೇಶ್ವರಾಣೀ ॥
ಕಾಯಜಾಭಯದಾತ್ರಿ ತೋಯಜೋದ್ಭವಪುತ್ರಿ
ಗಾಯತ್ರಿ ಗೌರಿ ಕಾತ್ಯಾಯಿನಿ ನಿರಾಕೃತಾ
ಪಾಯೆ ಕಿಳದೀಪುರನಿಕಾಯೆ ಚನ್ನಮ್ಮಾಜಿ ತಾಯಿ ಜಯಭದ್ರಕಾಳೀ ॥೨೮॥

ಜಯಜಯ ಮಹಾಮಾಯೆ ಜಂಗಮೇಶ್ವರಜಾಯೆ
ಜಯಜಯ ಸದೋಪಾಪ[ಯೆ] ಸಜ್ಜನಾಭಿಪ್ರಾಯೆ
ಜಯಜಯ ನುತಾಮ್ನಾಯೆ ಸರ್ವಜೀವನಿಕಾಯೆ ಮೈನಾಕಶೈಲ ಭಗಿನೀ ॥
ಜಯಜಯಾ ವಿರತಾಯೆ ಜಹ್ನುಸನ್ನುತ ಜೀಯೆ
ಜಯಜಯಾ ಕೃಪರಾಯೆ ಶರಣವೃಕ್ಷಚ್ಛಾಯೆ
ಜಯಜಯ ಮುನಿಧ್ಯೇಯೆ ಮಾಯಾಗುಣಾಜೇಯೆ ಕಿಳದೀಶಿ
ಭದ್ರಕಾಳೀ ॥ ೨೯ ॥

ಏಕಾಕಿನೀಶ್ವರಿ ದಿವೌಕೋವರಪ್ರದೆ ಸ
ದಾ ಕಾಲರೂಪಿಣಿ ದಯಾಕರೆ ನಿರಂಜನೆ ಚಿ
ದಾ ಕಲಿತ ನುತಿಪಾತ್ರೆ ಪಾಕಶಾಸನಭಗಿನಿ ಕಾಕಾಂಬಕವಿಘಾತಿನೀ ॥
ಮೂಕಮರ್ದಿನಿ ವಿಹೃತಘೂಕೆ ಭಕ್ತೇಷ್ಟ ಸು
ಶ್ಲೋಕೆ ಶರ್ವಾಣಿ ಮೈನಾಕಿ ಪರ್ವತಪುತ್ರಿ
ಲೋಕೇಶವಂದಿತೆ ಮಹಾಕಾಳಿ ಕಿಳದೀಪುರೀ ಕಾಂತೆ ಕಾಳಿ ಶರಣೂ ॥ ೩೦ ॥

ಕಾರುಣ್ಯಮೂರ್ತಿ ಕಾಂತಾರಜೀವಾಪೂರ್ತಿ
ವೀರಶೈವೋದ್ಧಾರಿ ವೀರವ್ರತಾಚಾರಿ
ಪಾರಮೇಶ್ವರತಂತ್ರಿ ದಾರುಣಾಸುರಹಂತ್ರಿ ಗೌರಿ ಜಗದೇಕಮಾರೀ ॥
ಪಾರದಶರೀರೆ ಸೃಷ್ಟ್ಯಾರಂಭಣವಿಹಾರೆ
ಭೂರಿ ಮಹಿಮಾಪನ್ನೆ ಸಾರಹಿಮವತ್ಕನ್ನೆ
ಮಾರಾಂಗದಾಯಿನಿ ಸದಾರಾಧ್ಯತಾಯಿ ನೀ ಕಿಳದೀಶಿ ಕಾಳಿ ಶರಣೂ ॥೩೧॥

ಅಂಬರ ಚರಾರ್ಚಿತ ಪದಾಂಬುರುಹ ಯುಗ್ಮೇ ಹೇ
ರಂಬ ನವಲೀಲಾ ಕದಂಬಿನಿ ಮಹೇಶ್ವರ ಕು
ಟುಂಬಿನಿ ಚಿದಾನಂದಲಂಬಿನಿ ನಿರಾತಂಕೆ ಕಂಬುಕಂಠಿ ಸದಾಶಿವೇ ||
ನಿಂಬ ಫಲಭೋಜಿ ತ್ರಿಯಂಬಕಿ ಸದಾಸೂತಿ
ಕಂಬಳಾಶ್ವತರನುತೆ ಬಿಂಬಾಧರೋಷ್ಠಿ ಜಗ
ದಂಬ ಕೆಳದೀಶ್ವರೀ ಜೃಂಭಾಶಿರೋದಂಡಿ ತುಂಬುರಸ್ತುತೆ ಪಾಹಿ ಮಾಂ ||೩೨||

ವಾಸವಸಹೋದರಿ ವಿಲಾಸವಾಙ್ಮಧುರಿ ಕೈ
ಲಾಸ ಶಿಖರಾನೇಕವಾಸಪರ್ಯಂಕತ
ಲ್ಪಾಸೀನೆ ವಿಂಧ್ಯಾಗವಾಸಿನಿ ಚಿದಂಬರಿ ಸದಾಸೂತಿ ಪರಮೇಶ್ವರೀ ||
ಕಾಸರಾಸುರಹಂತ್ರಿ ಭಾಸಮಾನ ಮಹಂತಿ
ರಾಸಭಾರಾವಘ್ನಿ ಸಾಸವದನುಜ ಭಗ್ನಿ
ದಾಸೀಜನಾಕೀರ್ಣೆ ಹಾಸಮುಖ ಸಂಪೂರ್ಣೆ ಕೆಳದೀಪುರಾಧೀಶ್ವರೀ || ೩೩ ||

ಕರಿವದನವಿಹೃತಿರತೆ ಶರಜನವನಟನಚಿತೆ
ಶರಣವನಫಲಚಯನೆ ತರಣಿ ಶಶಿಶಿರ ನಯನೆ
ಕರಣವಿರಹಿತ ಕರುಣೆ ಮರಣಭವನತ ಭರಣೆ ನಿಗಮನಯನ ವಚನರಚನೇ||
ಗಿರವರತನಯೆ ವಿಹೃತದುರಿತಭಯೆ ಭಜಕಜನ
ಸುರತರು ನಿಚಿತಕುಶಲೆ ಪರಮೆ ಶುಭಗುಣಚರಿತೆ
ಚಿರಸಹನಗಿರಿಗಹನೆ ವರಕೆಳದಿಪುರ ಸದನೆ ಜಗದವನ ವರದೆ ಶರಣಾ ||೩೪||

ವೀರಿಣಿ ಮಹೇಶ್ವರಿ ಕುಮಾರ ಜನಯಿತ್ರಿ ಸುರ
ವಾರವಂದಿತಪಾದವಾರಿರುಹೆ ದೈತೇಯ
ಮಾರಿ ಭಾಜಕಹೃದಯ ಸಾರಸ ನಿವಾಸಿನಿ ರಮಾರಮಣ ಸಹೋದರಿ ಶಿವೇ ||
ಕಾರುಣ್ಯಮೂರ್ತಿ ಚಿತ್ಸಾರೆ ಸಕಲಾಜಾಂಡ
ಭಾರಿಣೀ ಸದಾಚಾರಪೂರಿಣಿ ಮಹಾಮಾಯೆ
ಶಾರದೆ ಶಿವಾಂಕಸ್ಥೆ ಚಾರುಕೆಳದೀಶಾನಿ ಗೌರಿ ಜಯಭದ್ರಕಾಳೀ || ೩೫ ||

ಪಾಹಿ ಜಗದಾರಾಧ್ಯೆ ಪಾಹಿದನುಜಾಸಾಧ್ಯೆ
ಪಾಹಿ ಮಂತ್ರಾಂತನುತೆ ಪಾಹಿತಂತ್ರಾಂತ ಚಿತೆ
ಪಾಹಿ ಶರಣಾಪಾಂಗಿ ಪಾಹಿ ಕರುಣಾಸಂಗಿ ದೇವಿ ಸದ್ಭಕ್ತ ಜೀವೀ ||
ಪಾಹಿ ಕಾಯಾಭರಣೆ ಪಾಹಿ ಮಾಯಾವರಣೆ
ಪಾಹಿ ಪೂರ್ಣಾನಂದೆ ಪಾಹಿ ತೂರ್ಣಾಕಂದೆ
ಪಾಹಿ ಗಿರಿರಾಜಸುತೆ ಪಾಹಿ ಭಜಕಾವಿರತೆ ಕೆಳದೀ ಪುರಾಧೀಶ್ವರೀ || ೩೬ ||

ಅಶ್ವಲಾಯನ ವಿನುತೆ ಆದಿಮಧ್ಯಾಂತತತೆ
ಪಶ್ವಾದಿದೇಹಚಿತೆ ಪರಮಕಲ್ಯಾಣರತೆ
ವಿಶ್ವರೂಪಾನುಗತೆ ವಿವಿಧ ಕ್ರಿಯಾಸಹಿತೆ ಯೇಕಾಲ್ಲೆಲೋಲಮಲ್ಲೇ ||
ಅಶ್ವತ್ಥವನಚಿತ್ತೆ ಮಿತಶಕ್ತ್ಯಾಯತ್ತೆ
ಯಶ್ವಮುಖದನುಜಾತ್ತೆ ಮರರಕ್ಷೋಪಾತ್ತೆ
ಯಿಾಶ್ವರೀ ಮಹಾದೇವಿ ಸಹ್ಯಕಿಳದೀನಗರ ಕರ್ತೆ ಜಯಭದ್ರಕಾಳೀ || ೩೭ ||

ಖಂಡೇಂದು ನಿಟಲೆ ದೋರ್ದಂಡೆ ಮಹಿಷಾಹವೋ
ದ್ದಂಡೆ ಧೃತಮೇರುಕೋದಂಡೆ ನಾರಾಯಣಸುಕಾಂಡೆ
ಗರ್ಭೀಕೃತಾಜಾಂಡೆ ಭಕ್ತಾಬ್ಜಮಾರ್ತಂಡೆ ಸಿಂಹಸ್ಯಂದನೇ
ಕುಂಡಲಿನೀ ಕದನ ಪ್ರಚಂಡೆ ಸರ್ವಾಭರಣ
ಮಂಡಿತೆ ಮಹಾಮಾಯೆ ಪುಂಡರೀಕಾಸ್ಯೆ ಚಿ
ತ್ಪಿಂಡೆ ಕಿಳದೀನಗರಭಂಡಾರೆ ಸದ್ಗುಣಾಕುಂಡೆ ಜಯಭದ್ರಕಾಳೀ || ೩೮ ||

ಕ್ಷೇತ್ರಪಾಲಿನಿ ಪುಣ್ಯಗಾತ್ರೆ ಮೇನಾಗೇಂದ್ರ
ಪುತ್ರಿ ಸರ್ವೇಶ್ವರ ಕಳತ್ರೆ ಭಕ್ತಾರಣ್ಯ
ಚೈತ್ರೆ ವೇದಾಗಮ ಚರಿತ್ರೆ ನಿಖಿಲಾಜಾಂಡಧಾತ್ರಿ ದೈತೇಯಮಾರೀ ||
ಅತ್ರಿವರದಾತ್ರಿ ಚಿನ್ಮಾತ್ರೆ ನಾನಾವರ್ಣ
ಸತ್ರೆ ವಿಘ್ನೇಶಜನಯಿತ್ರಿ ನಿತ್ಯಾನಂದ
ನೇತ್ರೆ ಸಹ್ಯಕಿಳದೀ ತ್ರಿಯಂಬಕಿ ಸುರಸ್ತೋತ್ರೆ ಜಯಭದ್ರಕಾಳೀ || ೩೯ ||

ಗರಳಖಾದಿನಿ ಗಣಾಧೀಶ ಜನಯಿತ್ರಿ ಶಂ
ಕರಿ ಕರಟದೈತ್ಯಾರಿಣೀಶಾನಿ ಸಜ್ಜನಾ
ಕರೆ ಕಲಾನಿಧಿಧಾರಕಾಂತಾಕಟಾಕ್ಷೆ ರತಿನಾಥದಾಯಿನಿ ಧರಿತ್ರೀ ||
ಧರಜಾತೆ ಹರಜಾಯೆ ಹರಿಯಾನೆ ಚಿರಗಾನೆ
ತರಣಿ ಶಶಿಶಿಖಿನಯನೆ ಚಂಡದಿತಿಜಘ್ನಿ ಕಾ
ಸರದೈತ್ಯನಾಶಿ ನಾರಾಯಣಿ ಜಗಜ್ಜನನಿ ಜಯ ಕಿಳದೀನಗರ ಕಾಳೀ || ೪೦ ||

ಪಾವನಚರಿತ್ರೆ ಸಂಜೀವ ಕಾರಿಣಿ ಲೋಕ
ಭಾವನೆ ಭವಾರಣ್ಯದಾವೆ ದಾಕ್ಷಾಯಣಿ ಮ
ಹೀವರಣೆಯಾನುಪ್ರಭಾವಮರ್ದಿನಿ ದೈತ್ಯರಾವೆಯಸುರಾಹವನಟೀ ||
ಭೂಮಿಯತ್ತ್ರಳಮೂರ್ತಿ ದೇವದೇವಾಪೂರ್ತಿ
ಸೇವಕಾರ್ತಿವಿನಾಶಿ ಗೋವಾರಸಂಕಾಶಿ
ಶೈವಸಮಯೋಲ್ಲಾಸಿ ಸಾವಧಾನಾವಾಸಿ ಕಿಳದೀಶಿ ಕಾಳಿ ಶರಣೂ || ೪೧ ||

ಅಂಧಕಾಸುರ ಮದಸಿವಾರಿಣಿ ಮಹಾಮಾ[ಯೆ][1]
ಸ್ಯೆಂಧವಾಸುರ ಹಂತ್ರಿ ಪೂಜಕಮಹಾಪಾತ
ಕೇಂಧನಾನಲೆ ಸರ್ವಮಂಗಲೆ ಸದಾಶಿವೆ ಶ[ರ]ಣ್ಯೆ[2] ಸರ್ವಸ್ವತಂತ್ರೀ ||
ದಂಧನವಿಲಾಸ ಕಾರಿಣಿ ಷಟ್ಸ್ಥಲ ಬ್ರಹ್ಮ
ಬಂಧುರೆ ಮಹಾಮೇರು ಕೈಲಾಸ ಮಂದರಾ
ನಂದದುರ್ಗ್ಗೇಶ್ವರಿ ಶ್ರೀಸಹ್ಯ ಕಿಳದೀಶ್ವರಿ ತ್ರಾಹಿ ಭದ್ರಕಾಳೀ || ೪೨ ||

ಜಯಜಯ ಜಗನ್ಮಾತೆ ಜಂಭಾರಿನುತಗಾಥೆ
ಜಯಜಯ ಜರಾದೂರೆ ಜಂಗಮೇಷ್ಟಾಕಾರೆ
ಜಯಜಯ ಮಹಾಮಾಯೆ ಜನ್ಹುಮುಖಮುನಿಗೇಯೆ ಚಿರನಾದೆ
ಶರಣಮೋದೇ ||
ಜಯಜಯ ಪರಂಜ್ಯೋತಿ ಜರ್ಝ್ಝರಾಸುರಘಾತಿ
ಜಯಜಯ ಸದಾಪೂತೆ ಸದ್ಭಕ್ತ ಜನನೂತೆ
ಜಯಜಯ ಮಹೇಶ್ವರೀ ಸಹ್ಯ ಕಿಳದೀಶ್ವರೀ ಕಾಳಿಕಾದೇವಿ ದೇವೀ || ೪೩ ||

ಶರಣು ಸರ್ವಾಜಾಂಡನಿರ್ವಾಣಕಾರಿಣೀ
ಶರಣು ಸರ್ವಾಜಾಂಡನಿರ್ಮಾಣಕಾರಿಣೀ
ಶರಣು ಸರ್ವಾಜಾಂಡರಕ್ಷಾಧಿಕಾರಿಣೀ ಯೋಗಿನೀ ಯೋಗಾಯಿನೀ ||
ಶರಣು ಸರ್ವಾಜಾಂಡಭಸ್ಮಾವತಾರಿಣೀ
ಶರಣು ಚತುರಾಶೀತಿಲಕ್ಷಜೀವಾತ್ಮಕೀ
ಶರಣು ಸಹ್ಯಾದ್ರಿ ಕಿಳದೀನಗರವಾಸಿನೀ ಕಾಳಿಕಾದೇವೀಶ್ವರೀ || ೪೪ ||

ಸರ್ವಮಂಗಳೆ ಶರಣು ಸತ್ಯದಾಯಿನಿ ಶರಣು
ಗೀರ್ವಾಣನುತೆ ಶರಣು ಗೀಷ್ಪತೀಷ್ಟದೆ ಶರಣು
ನಿರ್ವಾಣಸತಿ ಶರಣು ನಿತ್ಯಕಾಯಿನಿ ಶರಣು ದೇವೀಸದ್ಭಕ್ತಿ ಜೀವೀ ||
ನಿರ್ವಿಕಾರಿಣಿ ಶರಣು ನಿಖಲರೂಪಿಣಿ ಶರಣು
ಗರ್ವಭೇದಿನಿ ಶರಣು ಗಾನಮೋದಿನಿ ಶರಣು
ಪರ್ವತಾತ್ಮಜೆ ಶರಣು ಪಾರ್ವಣೇಶ್ವರಿ ಶ[ರ][3]ಣು ಕಿಳದೀಶಿ
ಭದ್ರಕಾಳೀ || ೪೫ ||

---

1 'ತೆ' ಎಂದೂ ಓದಲು ಅವಕಾಶವಿದೆ; ಲಿಪಿಕಾರ ಒಡೆದು ತಿದ್ದಿದ್ದಾನೆ.
2 'ಶಣ್ಯೆ' ಎಂದಿದೆ.
3 'ಶಣು' ಎಂದಿದೆ.

ಜಯಜಯಾಂಧಕ ದೈತ್ಯ ಗರ್ವಪರ್ವತವಜ್ರೆ
ಜಯಜಯಾಮರಪಾಲನಾಲೋಕನಾಪೇಕ್ಷೆ
ಜಯಜಯ ಹಿರಣ್ಯಾಕ್ಷ ಭಕ್ತಕವರಾಹೇಷ್ಟೆ ಗಂಗಾಸಹೋದರೀ ಶಿವೇ ||
ಜಯಜಯ ಹಿರಣ್ಯಕಶಿಪಾವಹ ನೃಸಿಂಹನುದೆ
ಜಯಜಯ ವಿಭಾವರಿವಿಜೃಂಭಿರಾಜಾಂಡ ಕಚೆ
ಜಯಜಯಾವದ್ಯ ಸಹ್ಯಾಚಲಾವಾಸೆ ಕೆಳದೀನಗರ ಭದ್ರಕಾಳೀ || ೪೬ ||

ಶರಣು ಸರ್ವಾಜಾಂಡಪಾಲಿನಿ ಮಹಾಮಾಯೆ
ಶರಣು ಶಾಂಭವಭಕ್ತಹೃದಯಾಬ್ಜವಾಸಿನೀ
ಶರಣು ನಿತ್ಯಾನಂದೆ ನಿರ್ಮಲೆ ನಿರಾತಂಕೆ ದೇವದೇವಿ ಮಹೇಶ್ವರೀ ||
ಶರಣು ದಕ್ಷಕುಮಾರಿ ಸಚ್ಚಿತ್ಸುಖಾಧಾರೆ
ಶರಣು ಮೇನಾಗೇಂದ್ರಘನತಪೋವರ ದಾತ್ರಿ
ಶರಣು ಸಹ್ಯಾದ್ರಿ ಕೆಳದೀಪುರ ವಿಹಾರಿಣೀ ಶ್ರೀ ಭದ್ರಕಾಳಿ ಕಾಳೀ || ೪೭ ||

ನಾರಾಯಣಸಹಾಯಕಾರಿಣಿ ತ್ರಿದಶ ರ
ಕ್ಷಾರಂಭಮೂರ್ತಿ ನವಮಸ್ತಕಸ್ರಜಾ
ಹಾರಿಣಿ ಬ್ರಾಹ್ಮಣಾಸುರಮದೋದ್ರೇಕಮರ್ದಿನಿ ಭಕ್ತವತ್ಸಲೆ ಶಿವೇ ||
ವೀರಿಣಿ ಸಹಸ್ರದೋಃಸ್ಮೃತಿ ಶಕ್ತಿಮತಿ ಮಹಾ
ಮಾರಿ ಶಿವಚೇತನಿ ವಿಶಾಲಾಕ್ಷಿ ವಿಶ್ವೇಶಿ
ಗೌರಿ ಗಣಜನನಿ ಸಹ್ಯಾದ್ರಿ ಕೆಳದೀನಗರವಾಸಿ ಜಯಭದ್ರಕಾಳೀ || ೪೮ ||

ತ್ರಾಹಿಮಂದಾಕ್ಷಶತರೂಪೇಷ್ಟದಾಯಿನೀ
ತ್ರಾಹಿಮಾಂ ಮೇನಕಾಗಿರಿಕಾಮ್ಯಕಾರಿಣೀ
ತ್ರಾಹಿಮಾಂ ಮೇಖಲಾವಿಂಧ್ಯವರಪೂರಿಣೀ ನಾರಾಯಣಸಹೋದರೀ ||
ತ್ರಾಹಿಮಾಂ ದೇವೇಂದ್ರಸೋದರಿ ಮಹಾಕಾಳಿ
ತ್ರಾಹಿಮಾಂ ದೇವಾಸುರಾಹವವಿನೋದಿನೀ
ತ್ರಾಹಿಮಾಂ ಸಹ್ಯಕೆಳದೀನಗರವಾಸಿನೀ ಭದ್ರಕಾಳೀ ಭವಾನೀ || ೪೯ ||

ದೇವಾಸುರಾಹವವಿಲಾಸಶೀಲಿನಿ ಪಾಹಿ
ದೇವಾಸುರೈಶ್ವರ್ಯದಾನಲೀಲಿನಿ ಪಾಹಿ
ದೇವಾಸುರೋದ್ಭವಾವನನಾಶಕರಿ ಪಾಹಿ ಭಕ್ತವತ್ಸಲೆ ಭವಾನೀ ||
ಭೂವಿಯತ್ತಳಪೂರ್ಣದೇಹಧಾರಿಣಿ ಪಾಹಿ
ಜೀವದೇಹಾಕಾರನಟನಮಾಲಿನಿ ಪಾಹಿ
ದೇವಾಧಿದೇವಿ ಸಹ್ಯಾದ್ರಿ ಕೆಳದೀಶಾನಿ ಪಾಹಿಮಾಂ ಭದ್ರಕಾಳೀ || ೫೦ ||

ಯಮುಪರಾಕ್ರಮುದಾತ್ರಿ ಯಾಮುಳಾಗಮನೇತ್ರಿ
ಯಮಿಜನಾರ್ಚಿತಪಾದೆ ಯಾಲಾಫಲಾಸ್ವಾದೆ
ರಮಣೀಜನೇಶಾನಿ ರಾಮುಪಾತಕಹಾನಿ ರಾಕ್ಷಸಾಮರ ರಣೇ ಹೇ ||
ದ್ಯುಮಣಿ ಶಶಿಶುಚಿನಯನೆ ಸ್ರುಮರದಾನವಚಯನೆ
ಜಮದಗ್ನಿಮುನಿವಿನುತೆ ಜಮನಾಸುಹರಣಚಿತೆ
ಕಮಲದಾನವಭಂಗಿ ಕಮಲಾವರಾಪಾಂಗಿ ಕೆಳದೀಶಿ ಕಾಳಿ ಶರಣೂ || ೫೧ ||

ಬಲಿಚಕ್ರವರ್ತಿಬಂಧನ ಕಾರಯಿತ್ರಿ ಜಯ
ಬಲದೈತ್ಯಮರ್ದನಪ್ರೇರಣೇಶಾನಿ ಜಯ
ಖಲ ಹಿರಣ್ಯಾಕ್ಷಸಂಹಾರಪ್ರಚೋದಿನೀ ತ್ರಿಭುವನೇಶ್ವರಿ ಜಯಜಯಾ ||
ಬಿಲ ಕಾಮುದೈತೇಯರಣ ವಿಜಯ ವೂರ್ತಿ
ಕಲಕಲಾಸುರಸಂಯ್ಯುಗಾನಂದಚಿತ್ತೆ ಜಯ
ಮಲಯಮಂದರ ಸಹ್ಯ ಕೆಳದೀಪುರಾವಾಸೇ ಜಯ ಭದ್ರಕಾಳಿಕಾಳೀ || ೫೨ ||

ಶ್ರೀವಾಕ್ಪ್ರಲೋಮಜಾದಿಸ್ತುತಪದಾಂಭೋಜೆ
ದೇವದೇವಾಂಕ ಸಿಂಹಾಸನಾಸೀನೌಜೆ
ಭಾವಜ ಪುನರ್ದೇಹದಾನ ಕುಶಲಸಮಾಜೆ ದೇವಾಸುರಾಹವಮುದೇ ||
ಭೂಮಿಯತ್ತ್ರಳ ಜನನ ರಕ್ಷಾಮರಣವಾಜೆ
ದೇವೀರ ಕನಕಾವತೀ ಮನೋರಥನ್ವೈಜೆ
ಸಾವನದ ಸಹ್ಯಾದ್ರಿ ಕೆಳದೀಪುರಾವಾಸಿ ಭದ್ರಕಾಳೀಶ್ವರೀ ಜಯಾ || ೫೩ ||

ಭೂವ್ಯೋಮಪಾತಾಳಪಾಲನಾಂಬ ತ್ರಾಹಿ
ಸವ್ಯಾಪಸವ್ಯಭುಜರುಂಡಮಾಲೆ ತ್ರಾಹಿ
ಹವ್ಯವಾಹನೆ ಸೋಮಸೂರ್ಯನಯನೆ ತ್ರಾಹಿ ಭಕ್ತಹೃದಯಾಬ್ಜ ಹಂಸೀ ||
ಅವ್ಯಯಸತೀಜನಾರ್ಚಿತಪದಯುಗೆ ತ್ರಾಹಿ
ನವ್ಯಕನಕಾಂಡಜನನಾಂತಕರ್ತ್ರಿ ತ್ರಾಹಿ
ದಿವ್ಯಸಹ್ಯಾದ್ರಿ ಕೆಳದೀಪುರಾಧೀಶ್ವರೀ ತ್ರಾಹಿಮಾಂ ಭದ್ರಕಾಳೀ || ೫೪ ||

ದೇವಾಸುರಾಹವಾರ್ಭಟವಿಲಾಸಿನಿ ಪಾಹಿ
ದೇವಾಸುರೈಶ್ವರ್ಯದಾನಶೀಲಿನಿ ಪಾಹಿ
ದೇವಾಸುರಾರ್ಚಿತಪದಾಬ್ಜಯುಗಳೇ ಪಾಹಿ ದೇವಾಸುರಾಂಗಿ ಪಾಹೀ ||
ದೇವಾಸುರೋದ್ಭವಪ್ರಳಯಕಾರಕಿ ಪಾಹಿ
ದೇವಾಸುರೋಚ್ಚ ನೀಚಾನಂದಮಯಿ ಪಾಹಿ
ಭೂವಿಯತ್ತ್ರಳಮೂರ್ತಿಮತಿ ಸಹ್ಯಕೆಳದೀಶಿ ಪಾಹಿಮಾಂ ಭದ್ರಕಾಳೀ || ೫೫ ||

ಶರಣಾಗತನಿರೂಪೆ ಸೇವಕಜನಾ ಸ್ಥಾ[ಪೆ]
ಕರುಣಾಮೃತಾಲಾಪೆ ಕರಟದಾನವ ಕೋಪೆ
ಚಿರತಾಯುಷ್ಯಾಪೆ ಚಿತಕಪಲೋಡ್ಡೀಪೆ ಚಿತದಿವ್ಯಮಣಿಕಲಾಪೇ ||
ಪರಮೇಶ್ವರಾಂಕಾಪೆ ಪರ್ವತಾಶ್ರಯ ರೂಪೆ
[ಮ][4]ರಣಭವ ನಿರ್ದ್ಧಾಪೆ ಮಾಯಿಕಾಸುರತಾಪೆ
ವರಸಹ್ಯಕಿಳದೀಪೆ ವಾಣೀಫಲಾಖ್ಯಾಪೆ ರಕ್ಷಮಾಂ ಭದ್ರಕಾಳೀ || ೫೬ ||

ಶರಣಾಗತತ್ರಾಣೆ ಶಂಕರಾಸ್ಯಘ್ರಾಣೆ
ಕರಣಗುಣಿ ನಿರ್ಲಕ್ಷೆ ಕಾಮಿನೀಗಣಪಕ್ಷೆ
ಶರಣಿಶಶಿಶಿಖಿನೇತ್ರೆ ತತ್ವಾಧ್ವಚಿತಗಾತ್ರೆ ಕಾರುಣ್ಯಮೂರ್ತಿ ಕೀರ್ತೀ ||
ಧುರವೀರಣ ವಿನೋದೆ ದುಂದುಮಾಹವನಾದೆ
ಹರಿವಾಹನವಿಲಾಸೆ ನಿರುಚಿತಕೈಲಾಸೆ
ವರಸಹ್ಯ ಕಿಳದೀಶಿ ಪರಮಮಂಗಲಕೋಶಿ ಜಯಭದ್ರಕಾಳಿ ಕಾಳೀ || ೫೭ ||

ಶರ್ವಾಣಿ ಸಚ್ಚಿದಾನಂದವಿಗ್ರಹಿ ಶರಣು
ಸರ್ವಮಂಗಲೆ ಸದಾಚಾರಪಾಲಕಿ ಶರಣು
ನಿರ್ವಿಕಾರಿಣಿ ನಿರಂಜನಿ ನಿರಾಕುಳೆ ಶರಣು ಫಣಿವೇಣಿ ವಾಣಿ ಶರಣೂ ||
ದೂರ್ವಾಸಮುನಿತಪೋಭೀಷ್ಟದಾಯಿನಿ ಶರಣು
ದುರ್ವ್ಯಸನಜನ ನಿರಾಕರಣವೀಕ್ಷಣೆ ಶರಣು
ಪರ್ವತಾಭಯದಾತ್ರಿ ಶರಣು ಸಹ್ಯಾದ್ರಿಕಿಳದೀಶಾನಿ ಕಾಳಿ ಶರಣೂ || ೫೮ ||

ಜಯ ಷಟ್ಸ್ಥಲಜ್ಞಾನಿ ಹೃದಯ ಕಮಲಾವಾಸೆ
ಜಯ ಮೇನಕಾಹಿಮಾಚಲತಪೋವರಲಾಸೆ
ಜಯ ಮೇಖಲಾವಿಂಧ್ಯನುತಮೂರ್ತಿ ಯಾಗಂಟಿ ವರಪೂರ್ತಿ ಸರ್ವೇಶ್ವರೀ ||
ಜಯ ಸಚ್ಚಿದಾನಂದೆ ಭಕ್ತಜೀವನಕಂದೆ
ಜಯ ನಿತ್ಯಕಲ್ಯಾಣಿ ನಿರುಪಮಿತ ಫಣಿವೇಣಿ
ಜಯ ಸಹ್ಯಗಿರಿರಕ್ಷೆ ಕಿಳದೀಪುರಾಧ್ಯಕ್ಷೆ ಜಯಭದ್ರಕಾಳಿ ಕಾಳೀ || ೫೯ ||

ತ್ರಾಹಿಮಾಂ ನಾರಾಯಣ ಸಹೋದರೀಶ್ವರೀ
ತ್ರಾಹಿಮಾಂ ಭಕ್ತಪಾಪೌಘವಿಧ್ವಂಸಿನೀ
ತ್ರಾಹಿಮಾಂ ಭೂಸತೀಕಾರಾವಿಮೋಚನೀ ತ್ರಾಹಿಮಾಂ ಪರಮೇಶ್ವರೀ ||

---

4 'ದುರಣಭವ' ಎಂದೂ ಓದಬಹುದು

ತ್ರಾಹಿ ಮಾಂ ಯೋಗಾಂಟನೀ ವೇಷಧಾರಿಣೀ
ತ್ರಾಹಿ ಮಾಂ ನಿರುಪಾಧಿಕ ಜ್ಯೋತಿರಾತ್ಮ ಕೀ
ತ್ರಾಹಿ ಮಾಂ ಸಹ್ಯಾದ್ರಿ ಕಿಳದೀಪುರೇಶ್ವರೀ ತ್ರಾಹಿಮಾಂ ಭದ್ರಕಾಳಿ ‖ ೬೦ ‖

ಗೌರಿ ಗಣಜನನಿ ಗಂಗಾ ಸಪತ್ನೀಶಾನಿ
ವಾರಾಹಿ ಚಾಮುಂಡಿ ಶರ್ವಾಣಿ ಶಾಂಭವೀ
ನಾರಾಯಣಸಹೋದರಿ ಶಿವಾಂಕಮಂಡಿಕೆ ಮಹಾಮಾಯೆ ಪರಮೇಶ್ವರೀ ‖
ಧಾರಿಣೀ ಜೀವಸ್ವರೂಪಿಣಿ ನಿರಾತಂಕೆ
ಘೋರಿಣಿ ಹಿರಣ್ಯಾಕ್ಷ ನಾಶಕಾರಕಿ ದೇವ
ವಾರವಂದಿತೆ ಸಹ್ಯಕಿಳದೀಪುರಾವಾಸೆ ಜಯ ಭದ್ರಕಾಳಿ ಕಾಳೀ ‖ ೬೧ ‖

ಅಕ್ಷಯಶರೀರಿ ಭಾಳಾಕ್ಷಿ ಸರ್ವಾಮರಗ
ಣಕ್ಷೇಮಕರಿ ದಾನವಾಕ್ಷೇಪ ಸಂಹಾರಿ
ಪಕ್ಷಿವಾಹ[ನೆ] ವರದೆ ಸಾಕ್ಷಾನ್ಮಹಾದೇವಿ ಮೋಕ್ಷಾಂಗನಾಸ್ವರೂಪೇ ‖
ಲಾಕ್ಷಾಯತಾಂಘ್ರಿತಳೆ ಲಕ್ಷ್ಮೀಕೃತಾಜಾಂಡೆ
ಭಿಕ್ಷುಕಾರ್ಧಾಂಗಿ ಬಹು ಭಿಕ್ಷಾಟನ ವಿನೋದಿ
ಯಕ್ಷಗಾನಾನಂದೆ ಲಕ್ಷಕಿಳದೀನಗರಪಕ್ಷೆ ಜಯಭದ್ರಕಾಳೀ ‖ ೬೨ ‖

ದೇವದಾನವ ಗರ್ವಪರ್ವತಾ ಶನಿಮೂರ್ತಿ
ದೇವದಾನವ ಮನೋಭೀಷ್ಟದಾನಾಮೂರ್ತಿ
ಭೂವಿಯತ್ತಳ ಜನನ ಮರಣ ರಕ್ಷಣವೃತ್ತಿ ಭಕ್ತಸೇವಾನುವೃತ್ತೀ ‖
ಜೀವರಾಶ್ಯಂಗ ಸ್ವರೂಪಿಣಿ ನಿರೂಪಿಣೀ
ಪಾಪನಚರಿತ್ರೆ ಪರಮೇಶ್ವರಕಳತ್ರೆ ಭ
ಕ್ತಾವಾಸೆ ಸಹ್ಯ ಕಿಳದೀನಗರ ಪಾಲಿನೀ ಜಯಭದ್ರಕಾಳಿ ಕಾಳೀ ‖ ೬೩ ‖

ಜಯಜಯ ಮಹಾದೇವಿ ಜನನಮರಣಾಭಾವಿ
ಜಯಜಯ ಜಗನ್ಮಾತೆ ಜಂಭಾರಿನುತಗಾಥೆ
ಜಯಜಯ ಚಿದಾನಂದಸಿಂಧು ಜಂಗಮ ಬಂದು ರಣಧೀರೆ ಶರಣಸಾರೇ ‖
ಜಯಜಯ ಸದಾಚಾರೆ ಸತ್ಯಧರ್ಮಾಪಾರೆ
ಜಯಜಯ ನಿರಾತಂಕೆ ಸರ್ವದಾನವಟಂಕೆ
ಜಯ ಜಯಾಮಳ ಸಹ್ಯಕಿಳದೀಪುರಾಧೀಶಿ ಜಯಭದ್ರಕಾಳಿ ಕಾಳೀ ‖ ೬೪ ‖

ವೀರ ವಿತರಣ ಗುಣಾಧಾರೆ ಸುರವೈರಿಕುಲ
ಮಾರಿ ಮಹಿಮಾಭರಣೆ ನಾರೀಗುಣಾ ಕೀರ್ಣೆ
ತಾರುಣ್ಯಮಯಿಕಾಯೆ ಭೂರಿಯುದ್ಧೋಪಾಯೆ ಮಾರಾಂಗದಾನಶೌಂಡೇ ‖

ನಾರಾಯಣೀ ಪ್ರಭಾಪೂರಿ ಪರ್ವತವರಕು
ಮಾರೀ ಚರಾಚರ ವಿಹಾರಿ ನಾನಾರೂಪ
ಧಾರಿ ಸಹ್ಯಾಗೇಂದ್ರನಾರೀಪುರನಿವಾಸೆ ಗೌರಿ ಜಯಭದ್ರಕಾಳೀ || ೬೫ ||

ದೈತೇಯರಣರಂಗಲೀಲಾವಿನೋದಿನೀ
ಚೇತೋವಿಲಾಸಾಂಬರಾಭರಣ ಮೋದಿನೀ
ವಾತೂಲ ತಂತ್ರಾದಿ ಸಂಸ್ತುತ ಪದಾಂಭೋಜೆ ಸರ್ವಭುವನೈಕ ತೇಜೇ ||
ಪಾತಕಾನೇಕ ಪರ್ವತವಜ್ರರೂಪಿಣೀ
ಭೂತನಾಯಕ ಚಿತ್ತ ಕಾವ್ಯ ಪ್ರರೋಪಿಣೀ
ಪೂತ ಸಹ್ಯಾಗೇಂದ್ರ ಕೆಳದೀಪುರಾವಾಸೆ ರಕ್ಷಿಸೌ ಭದ್ರಕಾಳೀ || ೬೬ ||

ಸಾಕ್ಷಾನ್ಮಹಾದೇವಿ ರಾಕ್ಷಸಾಹವಭಾಮಿ
ಮೋಕ್ಷವಂದಿತಪಾದೆ ಭಿಕ್ಷಾಟನಾ ವಿನೋದೆ
ರಕ್ಷಿತಾಜಾಂಡಚಯೆ ವೀಕ್ಷಿತಾರ್ಚಕನಿಚಯೆ ನಾರಾಯಣಸಹೋದರೀ ||
ದಕ್ಷನಂದಿನಿ ವಿರೂಪಾಕ್ಷಿ ಸಿಂಹ್ವಾರೂಢೆ
ಯೀಕ್ಷಣತ್ರಯೆ ಶರಣಪಕ್ಷೆ ನಿಗಮಾಗಮಾ
ಧ್ಯಕ್ಷೆ ಸಹ್ಯಾದ್ರಿನಗರ ಕ್ಷೇತ್ರಪಾಲಿನೀ ರಕ್ಷಿಸೌ ಭದ್ರಕಾಳೀ || ೬೭ ||

[ ೬೮ನೇ ಪದ್ಯದ ಮೊದಲ ನಾಲ್ಕುಸಾಲುಗಳು ದೊರಕುವುದಿಲ್ಲ ]

(೪ನೇ ಸಾಲು) ×—————×—————ಯಿ[5]
ನದನದೀ ಸಂತುಷ್ಟೆ ನಾನಾ ಫಲಾಭೀಷ್ಟೆ
ನಿದಿತಸಹ್ಯಾವಾಸೆ ಕೆಳದೀಪುರವಿಲಾಸೆ ಜಯಭದ್ರಕಾಳಿ ಕಾಳೀ || ೬೮ ||

ಶ್ರೀನಾಥಸೋದರಿ ಸಹಸ್ರಬಾಹಾಭರಣೆ
ಭೂನಭೋಜನನಿ ಶಂಕರ ಕೋಪರೂಪಿಣೀ
ಭಾನುಶಶಿಶುಚಿನೇತ್ರೆ ಭಕ್ತಪೋಷಣ ಪಾತ್ರೆ ಶಂಕರಿ ಭವಾನಿ ದುರ್ಗೀ ||
ಮೇನಕಾಗಿರಿರಾಜನಂದನೆ ಮಹಾ ಮಾಯೆ
ಸಾನಂದ ಮುಖ್ಯ ಗಣಚಿತ್ತಫಲದಾಯಕಿ ಶ
ತಾನಂದ ನುತಪಾದೆ ಸಹ್ಯಾದ್ರಿ ಕೆಳದೀ ಪುರಾವಾಸೆ ಕಾಳಿ ಶರಣೂ || ೬೯ ||

ಶರಣು ಕರುಣೋಪೇತೆ ಶರಣು ಮರಣಾತೀತೆ
ಶರಣು ಹಿಮಗಿರಿಜಾತೆ ಶರಣು ಸುಮನೋವ್ರಾತೆ
ಶರಣು ಜಂಗಮ ಮೂರ್ತಿ ಲಿಂಗಪೂರ್ತಿ ಶರಣು ಕಲ್ಯಾಣಿವಾಣೀ ||

5 ಗರಿಮುರಿದಿದೆ.

ಶರಣು ಸೇವಕ ಹೃದಯೆ ಶರಣು ಭಾವಕಸದಯೆ
ಶರಣು ಮಂಗಲದೇಹೆ ಶರಣು ಗಂಗಾಸ್ನೇಹೆ
ಶರಣು ಸಹ್ಯಾಗಸುತೆ ಶರಣುಗುಹ್ಯಕವಿನುತೆ ಕೆಳದೀಪುರಾಧೀಶ್ವರೀ ॥ ೨೦ ॥

ವೀರಮಾಹೇಶ್ವರೋದ್ಧಾರೆ ಕಾರುಣ್ಯರಸ
ಪೂರೆ ಸಚರಾಚರ ಶರೀರೆ ನಿತ್ಯಾನಂದ
ಸಾರೆ ಸಕಲಾಜಾಂಡ ಭಾರೆ ಪರಮೇಶವಾಮೋರು ವಿಷ್ಟರ ಮಂಡಿತೇ ॥
ಗೌರಿ ಗುಹಜನನಿ ರಣಭೈರವಿ ನಿರಂಜನೋಂ
ಕಾರೆ ವಿಘ್ನೇಶ ಲೀಲಾರಬ್ಧ ಜನನಲಯ
ಕಾರಣೆ ಚಿದಾನಂದ ಚೀರೆ ಸಹ್ಯಾದ್ರಿ ಕೆಳದೀರೆ ಜಯ ಭದ್ರಕಾಳೀ ॥೨೧॥

ಜಯಜಯ ಜಗನ್ನಾಥೆ ಜಯಜಯಾಗಮಗಾಥೆ
ಜಯಜಯಾರ್ಕಕಪಾಲೆ ಜಯಜಯಾಮಿತ ಕಾಲೆ
ಜಯಜಯ ಮಹಾಮಾಯೆ ಜಯಜಯಾಮಳಕಾಯೆ ಲಲಿತಾಂಗಿ
ದೈತ್ಯಭಂಗೀ ॥
ಜಯಜಯ ನಿರಾತಂಕೆ ಜಯಜಯಾತುಳಶಂಕೆ
ಜಯಜಯ ನಿರಾಧಾರೆ ಜಯಜಯ[ಜಗ]ದ್ವಾರೆ[6]
ಜಯಜಯೇ[7] ಶಕಳತ್ರೆ ಜಯಜಯಾಖಿಲಗಾತ್ರೆ ಸಹ್ಯಕೆಳದೀಪುರೇಶೀ ॥೨೨॥

ಮೈನಾಕ ಸೋದರಿ ಮಹಾಭಾವಿನೀ ಪಂಕ
ಜಾನನೆ ಸದಾಚಾರ ಮಾನೆ ಮಹಿಮಾಲಯೆ ಚಿ
ದಾನಂದಕಂದೆ ಗಿರಿಸೂನು ಸಕಲಾಮರಾನೂನ ವಾಂಛಿತ ಕಾರಿಣೀ ॥
ಮಾನಿನೀಗಣ ನಿಹಿತೆ ಭಾನುಶಶಿಶುಚಿನಯನೆ
ಕಾನನಾಮೋದೆ ಭೂಷಾನೇಕಚಿತ್ರೆ ರು
ದ್ರಾನು ಕೂಲಾಕಾರೆ ನಾನಾಂಗಿ ಸಹ್ಯಕೆಳದೀನೆ ಜಯಭದ್ರಕಾಳೀ ॥೨೩॥

ಶಂಕರಾನಂದಾಂಕವಿಷ್ಟರಾಸೀನೆ ನಿ
ಶ್ಯಂಕೆ ದೇವಾಸುರಾಹವ ವಿನೋದನ ನಿರಾ
ತಂಕೆ ನಿಖಿಲಾಂಡನಾಯಕಿ ನಿರಾಭಾರಿಣಿ ನಿರಂಜನೆ ನಿರಾಕುಳಾಂಗೀ ॥
ಪಂಕಜಾಸನ ಪಂಕಜಾಕ್ಷೇಂದ್ರ ನುತಪಾದ
ಪಂಕಜೆ ಪರಬ್ರಹ್ಮ ನಾರಾಯಣೇಶ್ವರಿ ನಿ
ರಂಕುಶೆ ಮಹಾಮಾಯೆ ಸಹ್ಯ ಕೆಳದೀಪುರಾಧೀಶಿ ಜಯಭದ್ರಕಾಳೀ ॥೨೪॥

---

6 'ಜಗ' ಎಂಬ ಪದವನ್ನು ಸಣ್ಣಗೆ ಹೊಡೆದು ಬರೆದಿದೆ
7 'ಜಯಜಯೀಶಕಳತ್ರೆ' ಎಂದೂ ಓದಬಹುದು

ಪಾಹಿ ಸಚರಾಚರ ಪ್ರಾಣಿದೇಹಾಕಾರೆ
ಪಾಹಿ ಶಿವರೂಪಿಣೀ ಶಿವರೂಪ ಜನಯಿತ್ರಿ
ಪಾಹಿ ದೇವಾಸುರರಣಾಂಗಣವಿಲಾಸಚಿತೆ ಭವ್ಯಾಂಗಿ ದಿವ್ಯಲಿಂಗೀ ||
ಪಾಹಿ ಪರಮೇಶ್ವರಾದ್ಧಾ೯ಂಗಮಂದಿರವಾಸೆ
ಪಾಹಿ ಭಾಜಕಮನೋಭೀಷ್ಟದಾನೋಲ್ಲಾಸೆ
ಪಾಹಿ ಸಹ್ಯಾದ್ರಿ ಕೆಳದೀಪುರಾಧೀಶ್ವರಿ ಭದ್ರಕಾಳೀಭವಾನೀ ||೭೫||

ಸ್ವರ್ಲೋಕ ಪಾಲಕ ಕಿರೀಟಮಾಣಿಕ್ಯ ರೋ
ಚಿರ್ಲಾಲಿತಾಂಘ್ರಿಯುಗೆ ನಿತ್ಯಯುದ್ಧಾಯತವ
ಪುರ್ಲಕ್ಷ್ಮೀ ದಿವ್ಯಾಯುಧಾಯತಸಹಸ್ರದೋರ್ದಂಡೆ ಕದನಪ್ರಚಂಡೇ ||
ದುರ್ಲಿಖಿತಭಾಳೋನೆ ದುಷ್ಟದಾನವಹಾನೆ
ನಿರ್ಲಪಿತ ದೇಹಾಂತೆ ಸೂರ್ಯಚಂದ್ರಾನಲಾ
ಚ್ಚಿರ್ಲೀನ ನಯನೆ ಸಹ್ಯಾದ್ರಿ ಕೆಳದೀ ಪುರಾಧೀಶಿ ಜಯಭದ್ರಕಾಳೀ ||೭೬||

ಸರ್ವ ಜೀವಾವಾಸೆ ಸದಸದ್ವಿರಳಭಾಷೆ[8]
ನಿರ್ವಿಷಯ ಚಿನ್ಮಾತ್ರೆ ನಿತ್ಯಸುಂದರ ಗಾತ್ರೆ
ಶರ್ವಾಣಿ ಶುಕವಾಣಿ ಶಿವರಾಣಿ ಕಲ್ಯಾಣಿ ದೂತಾಸುರಾಹವಾಣೀ ||
ದುರ್ವಾದಿಮುಖದಂಡೆ ದುರ್ವಾಶ ಫಲಭಾಂಡೆ
ಗೀರ್ವಾಣನುತಿಮೋದೆ ಗೀಷ್ಪತಿ ಸ್ತುತಿನೋದೆ
ಪರ್ವತೇಶ್ವರ ತನಯೆ ಸರ್ವತಿಥಿಯುಗ ವಿನಯೆ ಸಹ್ಯ ಕೆಳದೀಶಿ
ಶರಣೂ ||೭೭||

ಹರಶರೀರಾರ್ಧಾಂಗಿ ಶರಣಜಲಜ ವಿಹಂಗಿ
ಕರುಣಾಯತಾಪಾಂಗಿ ಸುತನುತಃಹವ ರಂಗಿ
ಧರಣೀಂದ್ರ ವರಧಾತ್ರಿ ಮರಣವರ್ಜಿತಗಾತ್ರಿ ಜಗದಂಬೆ ವೇದಲಂಬೇ ||
ಚಿರಕಾಯ ಸಂಹಾರೆ ಪರದೈತ್ಯ ಹೂಂಕಾರೆ
ಸರಸ ಸಂಗೀತಾಶೆ ದುರಿತ ಕಂಟಕನಾಶೆ
ವರಸಹ್ಯ ಕೆಳದೀಶಿ ಪರಮಪಟ್ಟಸ್ಥಲಕೋಶಿ ಜಯಭದ್ರಕಾಳ ಕಾಳೀ ||೭೮||

ದೇವದಾನವ ಮಾನವಾಹನವಿಲಾಸಿನೀ
ದೇವದಾನವ ಮಾನವೈಶ್ವರ್ಯದಾಯಿನೀ
ಭೂವಿಯತ್ತಳ ಗಮನ ಪಾದುಕಾಯತಪಾದೆ ನಾನಾ ನಟನನಾಯಕೀ ||

---

8 'ಸದಸದ ವಿರಳಭಾಷೆ' ಎಂದಿದೆ.

ಸೇವಕಾಭೀಷ್ಟದಾಯಕಿ ನಾಶಕಾಯಕೀ
ಪಾವನ ಚರಿತ್ರೆ ನಿರ್ಮಲಗಾತ್ರೆ ಶಿವಪಾತ್ರೆ
ಜೀವವರಧಾತ್ರಿ ಸಹ್ಯಾದ್ರಿ ಕೆಳದೀನಗರವಾಸೆ ಜಯಭದ್ರಕಾಳೀ ||೭೯||

ಅಂಧಕಾಸುರಗರ್ವ ಪರ್ವತಾಶನಿದಾನ
ವೇಂಧನಾನಲೆ ಸುರಾಸುರ ಶಿರೋಮಾಲಾಂಕೆ
ಸಂಧಿ ಸರ್ವ್ವಾಜಾಂಡ ಸೃಷ್ಟಿ ಸ್ಥಿತಿ ಪ್ರಳಯ ನಿತ್ಯಕೃತ್ಯಾಶಯಾಢ್ಯೇ ||
ದಂಧನಾದಂಧನವಿನೋದಶೀಲಿನಿ ಮಾಯೆ
ಬಂಧಮೋಕ್ಷ ಸ್ವರೂಪಿಣಿ ನಿಜಪದಾರ್ಚಕ ಜ
ನಾಂಧೋವಿಧಾಯಿನೀ ಶ್ರೀ ಸಹ್ಯಕೆಳದೀಶಿ ರಕ್ಷಿಸಾ ಸರ್ವಜಗಮಂ ||೮೦||

ವಿಶ್ವತೋಮುಖಿ ವಿರೂಪಾಕ್ಷಿ ವಿದ್ಯಾದಾತ್ರಿ
ವಿಶ್ವಂಭರಾ ಶಿಕ್ಷೆ ವಿಕಟಾಂಗಿ ವಿಪರೀತೆ
ಶಾಶ್ವತಾನಂದೆ ಶಂಕರವಾಮತನುಗೇಹೆ ದೇವಾಸುರಾಹವಮುದೇ ||
ಅಶ್ವಲಾಯನವಿನುತೆ ಆದಿತ್ಯಸಂಕಾಶೆ
ಪಶ್ವೀಶವರಮೂರ್ತಿ ಪಂಡಿತೇಚ್ಛಾಮೂರ್ತಿ
ನಶ್ವರಾಮಯದೂರೆ ಸಹ್ಯಕೆಳದೀನಗರಪಾಲೆ ಜಯಭದ್ರ ಕಾಳೀ || ೮೧ ||

ಹರಿವಿರಂಚಿಪ್ರಮುಖ ಸುರಮಣಿ ಮಕುಟಕಿರಣ
ಪರಿಚಿತಪದಾಂಭೋಜೆ ಸಂಗರಾಯಕ ತೇಜೆ
ನಿರುಪಮಾನೇಕಮಾರೀ ವಿಲಾಸ ವಿರಾಜಿತೆ ಸರ್ವೇಶರಾಶಯಾಜೇ ||
ಪರತತ್ವ ಸಂಧಾನೆ ಪಂಚಾಕ್ಷರಿಧ್ಯಾನೆ
ಪರಮಹಂಸಿನಿ ಪರಬ್ರಹ್ಮಿಣಿ ಪರಂಜ್ಯೋತಿ
ಶರಣರಕ್ಷಾಹೃದಯೆ ಸಹ್ಯಕೆಳದೀ ನಗರಪಾಲೆ ಜಯಭದ್ರಕಾಳೀ || ೮೨ ||

ಸ್ನಿಗ್ಧಗಂಧಾಮೋದೆ ದೇವದಾನವ ಶಿರ
ಸ್ರಗ್ಧರೆ ಸದಾಚಾರ ಸಂಪನ್ನನುತಿಪಾತ್ರೆ
ದುಗ್ಧಾಬ್ಧಿವರಧಾತ್ರಿ ದುಷ್ಟಾಸುರ ಖನಿತ್ರಿ ಕಲ್ಯಾಣಿ ಕೀರವಾಣೀ ||
ದಗ್ಧದಾನವವಿಪಿನೆ ದಕ್ಷಾಧ್ವರಧ್ವಂಸೆ
ಮುಗ್ಧಭಕ್ತಾಭೀಷ್ಟೆ ಮುನಿಗಣಾರ್ಚನ ತುಷ್ಟೆ
ರುಗ್ಧಾವನಾಪಾಯೆ ಸಹ್ಯಕೆಳದೀನಗರವಸತಿ ಜಯಭದ್ರಕಾಳೀ || ೮೩ ||

ಜಂಭಾರಿವಿನುತಪಾದಾಂಭೋಜೆ ಸರ್ವ ವಿ
ಶ್ವಂಭರಾ ಪಾಲಕಿ ವಿಜೃಂಭಿಣಿ ನಿರಾಳೆ ಧೃತ
ದಂಭೋಳಿ ನಿಖಿಲೋದರಂಭರಿ ಸುರಾಸುರ ಸ್ತಂಭಿನಿ ಸಮಸ್ತ ಜನನೀ ||

ಶಾಂಭವಿ ನಿರಘೆ ರಣಾರಂಭಿಣಿ ನವೀನಾಂಗಿ
ರಂಭಾನಟನಮೋದೆ ಕುಂಭಿನೀಬಂಧಕಿ ನಿ
ಕುಂಭಿನಿ ಸಮಸ್ತ ವಿಷ್ಕಂಬೆ ಕೆಳದೀನಗರ ಸಂಭವನೆ ಕಾಳಿ ಶರಣೂ ‖ ೮೪ ‖

ಕಂಕಾಳ ಚಿತಹಸ್ತೆ ಕಾರುಣ್ಯರಸಶಸ್ತೆ
ಶಂಕರಾಂಕಾಸೀನೆ ಶರಣರಕ್ಷಾಧೀನೆ
ಹೂಂಕಾರ ನಿರತಾಸ್ಯೆ ಹುಂಡಯುದ್ಧರಹಸ್ಯೆ ಶರ್ವಾಣಿ ಶಾಶ್ವತಾಣೀ ‖
ಪಂಕಾಜಾಸನವಿನುತೆ ಪದ್ಮಾಕ್ಷವರ ಘನತೆ
ಕಿಂಕರಾಭೀಷ್ಟಕರಿ ಕಿನ್ನರೀ ಜನವಿಹರಿ
ಓಂಕಾಳಿ ಬಾಕಾಳಿ ಹೋಂಕಾಳಿ ತೇಂಕಾಳ ಕೆಳದೀಪುರಾಧೀಶ್ವರೀ ‖ ೮೫ ‖

ಮಾರೀಗಣಾಕೀರ್ಣೆ ಮಹಿಮಾಭಿರಾಮಾರ್ಣೆ
ಭೂರಿಯುದ್ಧಾಮೋದೆ ಭುವನರಕ್ಷಾಹ್ಲಾದೆ
ಕಾರುಣ್ಯರಸಪೂರ್ತಿ ಕಾಸರಾಸುರ ಜೂರ್ತಿ ಶಕ್ತಿಸರ್ವತ್ರಯುಕ್ತೀ ‖
ತಾರಕಾಂತಕಮಾತೆ ಕಾರುಣ್ಯ ತನುಪೂತೆ
ವೈರಿಮಸ್ತಕಶೂಲೆ ವೈಭವಾಮೃತ ಜೀಲೆ
ಮಾರಣಾಧ್ವರಭಂಗಿ ಮಾರತನುದಾನಾಂಗಿ ಕೆಳದೀಶಿ ಶರಣೂ ‖ ೮೬ ‖

ವೈರಾಗ್ಯಗುಣಮಾನ್ಯೆ ವೈರಿಮಸ್ತಕಶೂನ್ಯೆ
ಮಾರೀಗಣಾಹ್ಲಾದೆ ಮಾರರಕ್ಷಾಮೋದೆ
ಶೂರಿಜನನುತಚರಿತೆ ಶೂರಮಾಯಾವಿರತೆ ಕಾಮಾಕ್ಷಿ ಕಾಮರೂಪೇ ‖
ನಾರಾಯಣಾಗ್ರಭವೆ ನಾರಾಯಣೇಷ್ಟ ಶಿವೆ
ಭೂರಿಕದನಾರಾವೆ ಭೂಕಥಾದ್ವಾರ್ಂಗಾವೆ
ತಾರೇಶನೇಮಶಿರೆ ತಾರುಣ್ಯ ಕಾಯಧರೆ ಸಹ್ಯ ಕೆಳದೀಶಿ ಶರಣೂ ‖ ೮೭ ‖

ಪ್ರಣವಸ್ವರೂಪಿಣಿ ಪರಬ್ರಹ್ಮಪರನಾದೆ
ಅಣಿಮಾದಿಸಿದ್ಧಿಯೇಕಾಂಗಿನಿ ನಿರಾಳೆ ಚಿ
ದ್ಘೃಣಿ ಘೂರ್ಣಿತಾಸುರಾಹವೆ ಘೃಷ್ಟಿ ಹರಿಸಹಾಯಿನಿ ನಿತ್ಯೆ
ನಿರ್ಮಾಯಿಕೇ ‖
ಗಣಪತಿ ವಿನೋದಿನಿ ಗಣಾನಿ ಗಾನಾನಂದೆ
ಮಣಿಕನಕತಾಟಂಕೆ ಮಹಿಷದಾನವಟಂಕೆ
ಗುಣವತಿ ಗುಣತ್ರಯಾಸನ್ನೆ ಕೆಳದೀನಗರದೇವಿ ಜಯಭದ್ರಕಾಳೀ ‖ ೮೮ ‖

ಸಕಲ ನಿಷ್ಕಲದೇಹೆ ಶರಣು ರಕ್ಷಾಗೇಹೆ
ಅಕಲಂಕ ಚಾರಿತ್ರೆ ಯಾಗನಾಶನಗಾತ್ರೆ
ನಿಕಟೇ ಕೃತಾಶೇಷೆ ನೈಷ್ಠಿಕದಯಾಶೇಷೆ ಕಾಸರರಣಾಹ್ಲಾದಿನೀ ||
ಶಕಲ ಚಂದ್ರನಿಟಲೇ ಶಂಕರಾದ್ಧಾರ್ಂಗರತೆ[9]
ಕಕಹಂತ್ರಿ ಕಾಳಾಂಗಿ ಕಾಳರಾತ್ರಿ ಕರಾಳಿ
ಚಕಿತಕನಕಾಂಡನಾಯಕಿ ಸಹ್ಯಕಿಳದೀನಗರ ನಿಲಯೆ ಕಾಳಿ ಶರಣೆ || ೮೯ ||

ಸಂತತಾಪಾಯೋನೆ ಚಿಂತಿತಾರ್ಥ ವಿಧಾನೆ
ಕಂತುಪೂಜಾಮೋದೆ ಶಾಂತಭಕ್ತವಿನೋದೆ
ಸಂತಾನ ಸುಮವೇಣಿ ದಾಂತಯೋಗಾಂಗಾಣೆ ಶಿವರೂಪೆ ಭವಕಲಾಪೇ ||
ಅಂತಕಾಂತಕ ಚಿತ್ತೆ ಕಾಂತಾಜನಾಯತ್ತೆ
ದಂತದೃತದಿತಿಜಕುಲೆ ಕುಂತಧಾರಿಣಿ ಕುಶಲೆ
ಮಂತವ್ಯ ಚರಿತೆ ಸುಮಹಂತಿ ಕಿಳದೀಪುರ ಜಯಂತಿ ಜಯಭದ್ರಕಾಳೀ ||೯೦||

ದೇವದಾನವ ಕದನ ಕೋಲಾಹಲ ವಿನೋದೆ
ದೇವದಾನವ ಕಾಮ್ಯ ಭಾಗ್ಯ ಕಾರಣನಾದೆ
ದೇವದಾನವ ಕನಕಮಣಿಮಕುಟ ಸಂಘಟ್ಟಘೃಷ್ಟ ಚರಣಾರವಿಂದೇ ||
ದೇವದಾನವ ಜನನಪಾಲನಾತೋದ್ಯೋಗೆ
ದೇವದಾನವ ಸಮರ್ಪಿತ ಪೂಜನಾರಾಗೆ
ದೇವದಾನವ ರೂಪಧಾರಿಣೀ ಶ್ರೀಸಹ್ಯಕಿಳದೀ ಪುರಾಧೀಶ್ವರೀ || ೯೧ ||

ಪಾವನಚರಿತ್ರೆ ಪರಮಾನಂದಸುತಗಾತ್ರೆ
ದೇವೀರ ವರಧಾತ್ರಿ ದೀನಜನ ಫಲನೇತ್ರಿ
ಭಾವಿನಿ ಭವಾನಿ ಭಕ್ತಾಶಯಾಂಬುಜಹಂಸಿ ಭಾರತೀ ಲಕ್ಷ್ಮೀಡಿತೇ ||
ದೇವದೇವಾದ್ಧಾರ್ಂಗಿ ದೇವತಕೃಪಾಪಾಂಗಿ
ಭೂಮಿಯತ್ತಳ ಹಸ್ತೆ ಭುವನೈಶ್ವರೋಪಾಸ್ತೆ
ದೈವಜ್ಞೆ ಸಹ್ಯಾದ್ರಿ ಕಿಳದೀಪುರಾಧೀಶಿ ಭಕ್ತಜನಕಾಮ್ಯರಾಶೀ || ೯೨ ||

ಪ್ರಮಥಾಸುರಾಹವ ವಿನೋದಶೀಲಿನಿ ಮಹಾ
ಪ್ರಮಥಾಗಣಾಲಾಪ ಗೋಷ್ಠೀ ವಿಲಾಸಿನೀ
ಜಮದಗ್ನಿ ವರಧಾತ್ರಿ ಜನನ ರಕ್ಷಾಂತಕಾರಕಿ ಕಪರ್ದಿನಿ ಜೋಗುಳೀ ||

---

9 'ಶಂಕರಾಧಾಂಗರತೆ' ಎಂದಿದೆ

ವಿಮಳೆ ವಿಶ್ವೇಶ್ವರಿ ವಿರೂಪಾಕ್ಷಿ ಶರ್ವಾಣಿ
ಕಮಲೆ ಕಾತ್ಯಾಯನಿ ಕಲಾವತಿ ಮಹಾಮಾಯೆ
ರಮಣೀಯ ಚಾರಿತ್ರೆ ಸಹ್ಯಕಿಳದೀನಗರವಾಸೆ ಜಯಭದ್ರಕಾಳೀ ‖ ೯೩ ‖

ಭದ್ರಸಿಂಹ್ಯಾರೂಢೆ ದಾನವ ರಣಘೌಢೆ
ಚಿದ್ರೂಪಧಾರಿಣೀ ಚಿರಂತನ ಕಲಾರಿಣಿ
ಸದ್ರಹಸ್ಯಾಪಾಂಗಿ ಸಜ್ಜನಹೃದಯಲಿಂಗಿ ಭವಭಂಗಿ ನಿತ್ಯಸಂಗೀ ‖
ಅದ್ರಿರಾಜ ತನೂಜೆಯಾದಿತ್ಯ ಸಂಭ್ರಾಜೆ
ನಿದ್ರಾಗುಣಾಪಾಯೆ ನಿತ್ಯೈಶಂಕರ ಜಾಯೆ
ಮುದ್ರಿತಾಸುರ ಸೇನೆ ಮುನಿಗಣಸ್ತುತಮಾನೆ ಕಿಳದೀಶಿ ಕೀರ್ತಿಕೋಶೀ ‖೯೪‖

ಕಾಮಾಕ್ಷಿ ಕಮಠೀರಥೆ ಜ್ಞಾನದೇವೀರಿ
ಭೀಮರಥಿಯನ್ನಪೂರ್ಣೆ ಭ್ರಮರಿ ಜೋಗುಳೇ
ಶ್ರೀಮತಿ ಸ್ವರ್ಣೆ ಸರ್ವಾಣಿಯಾರ್ಯೆ ಭವಾನಿ ಚಂಡಿ ದಾಕ್ಷಾಯಣಿ ಶಿವೇ ‖
ಕಾಮೇಶ್ವರೀ ತ್ರಿಯಂಬಕಿ ವಿರೂಪಾಕ್ಷಿ ಸು
ತ್ರಾಮಭಗಿನಿ ಮೃಡಾನಿ ಮೃತ್ಯುಂಜಯೆ ತ್ರಿಪುರೆ
ಹೈಮವತಿ ಸಹ್ಯ ಕಿಳದೀಪುರಾವಾಸಿನೀ ತ್ರಾಹಿಮಾಂ ಭದ್ರಕಾಳೀ ‖ ೯೫ ‖

ಕುಂಡಲಿನಿ ಕೃತಕೃತ್ಯೆ ಪಂಡಿತಾಚಾರ್ಯತ್ತೆ
ಖಂಡಶಶಿ ನಿಭನಿಟಿಲೆ ಹಂಡದಾನವ ನಿಧನೆ
ಹುಂಡಾಸುರಘ್ನೆ ದೋರ್ದಂಡಸಾಹಸ್ರಚಿತೆ ಶರ್ವಾಣಿ ಕೀರವಾಣೀ ‖
ಚಂಡಿ ಸರ್ವೆ‌ಶ್ವರಿ ಚಾಮುಂಡಿ ನಾನಾಂಗನಾ
ಮಂಡಲೆ ಸಮಸ್ತಕನಕಾಂಡನಾಯಕಿ ರತ್ನ
ಕುಂಡಲೆ ಶಿವಾರ್ಧಾಂಗಮಂಡನೆ ಶ್ರೀಸಹ್ಯಪಂಡೆ ಜಯಭದ್ರಕಾಳೀ ‖ ೯೬ ‖

ಕುಂಭಾಸುರಘ್ನೆ ವಿಶ್ವಂಭರೆ ಮಹೇಶ್ವರಿ ನಿ
ಕುಂಭಿನಿ ಸದಾಶಿವೆ ಚಿದಂಭೋಧಿ ಶರ್ವಾಣಿ
ಕುಂಬಿನಿ ಸದಾಚಾರ ಸಂಭೂತಿ ಕಾಮಾಕ್ಷಿ ಭೀಮಕಂದರ ವಿಲಾಸೇ ‖
ದಂಭೋಳಿಕರಭಗಿನಿ ಜೃಂಭಾನಿವಾರಣಿ ಸು
ಖಂಭರಿ ಸದಾನಂದಸಂಭವೆ ದಯಾಪಾಂಗಿ
ಶಾಂಭವಿ ರಣಸ್ತಂಭಿನಿ ಶಿವಾರ್ಧಾಂಗಿ ರಗರಂಭೆ ಜಯಭದ್ರಕಾಳೀ ‖ ೯೭ ‖

ಬಲ್ಗುರುವದಸುರರಾಪಲ್ಗಳನುದಿರೆ ಕುಟ್ಟಿ
ನಲ್ಗೊರಳೊಳಾಂತು ಮಿಾಸಲ್ಗಾಡಿಯಿಂ ತನ್ನ
ಕಾಲ್ಗೆ ಕುಂಬಿಡುವರ್ಗೆ ಮೇಲ್ಗಯ್ಯನೀವುತುಂ ಸಾಲ್ಗೊಂಡಲೋಕಂಗಳಂ ‖

ಕೀಲ್ಗಟ್ಟಿಕಾದಿದಾ ಫಲ್ಗುಣನ ಮಚ್ಚಿಯ ಬೆ
ಶಲ್ಗಳಿಂ ಕೋರಿ ಕೂದಲ್ಗೊನೆಯಿನೊಗೆದರಿಂ
ಪಲ್ಗೆಲಸವಂ ಕೊಳುತೆ ಬಲ್ಗೆಳದಿಯೊಳ್ನಿಲ್ತುಮೇಲ್ಗಾಳಿ ಸಲಹು
ಜಗಮಂ ॥ ೯೮ ॥

ಸನಕಾದಿಯೋಗಿ ಹೃದಯಾಂಭೋಜಹಂಸಿನೀ
ಕನಕಾದ್ರಿಕೋದಂಡ ಕಾಯಾರ್ದ್ಧಶಂಸಿನೀ
ದಿನಪಶಶಿಶುಚಿನಯನದೀಪ್ತಿದೀಪ್ತಾಂಶಿನೀ ನಿರಾವರಣೆ ನಿರುಪದ್ರವೇ ॥
ಆ ನಿಶಾರಾತ್ರಿ ರಣರಂಗ ಪ್ರಶಂಸಿನೀ
ಮುನಿಜನ ತಪೋಭೀಷ್ಟದಾನನಿಃಕಂಪಿನೀ
ಜನನ ಮರಣಾವನತಿರೋಧಿ ಕರುಣಾವ್ಯಾಪ್ತಿಮೂರ್ತಿ
ಜಯಭದ್ರಕಾಳೀ ॥ ೯೯ ॥

ಶರಣಾರ್ತಿಭಂಜನೆ ಶರಣ್ಯೆ ಶಾಂಭವಿ ಶಂಭು
ಕರಣೆ ಕರಟಾಸುರಾಂತಕಿ ಕಲಾವತಿ ಕಾಲ
ಭರಣೆ ಭವರೋಗವೈದ್ಯೆ ಭವಾನಿ ಭಕ್ತವತ್ಸಲೆ ಭರ್ಗೇ ಭವ್ಯಮೂರ್ತೇ ॥
ನಿರುಪಮೆ ನಿರಂಜನೆ ನಿರಾಳೆ ನಿತ್ಯಾನಂದೆ
ಹರಿಣಾಕ್ಷಿ ಹರಿಭಗಿನಿ ಹರಿವಾಹೆ ಹಂಸಿ ಶಂ
ಕರಿ ಸಹ್ಯಕೆಳದೀಶಿ ಕಲಿನಾಶಿ ಪಾಲಿಸಾ ಕಾಳಿಕಾದೇವಿ ಜಗಮಂ ॥ ೧೦೦ ॥

ದುಸ್ಸಪ್ನದೂರಿಣೆ ದುರಾಚಾರಿಘಾತಿನಿ ವಿ
ಪಸ್ವದಿಂದುಜ್ವಲನಯನೆ ನಾರಾಯಣಿ ಮ
ಹೇಶ್ವಾಸ ಹಸ್ತೆ ಹಸ್ತ್ಯಸುರಮರ್ದಿನಿ ನಿರಾಕುಳೆ ನಿರಂಜನೆ ನಿರಾಳೇ ॥
ಶಾಶ್ವತೆ ಶತಾನಂದೆ ಶರಭಿ ಶಾಂಭವಿ ಸರ್ವ
ಪಶ್ವಂತರಂಗಸಂಸ್ಥಿತೆ ಸಹ್ಯಕೆಳದೀಪು
ರಸ್ವಯಂಜ್ಯೋತಿ ಜಯಜಯ ಭದ್ರಕಾಳಿ ಪೂಜಕ ಮನೋರಥ
ಸೂರಾಳೀ ॥ ೧೦೧ ॥

ಭೃಂಗಕುಂತಳೆ ಕೋಮಲಾಂಗಿ ಸರ್ವೇಶ್ವರಾ
ರ್ದ್ಧಾಂಗಿ ಸಿಂಹಾರೂಢೆ ಗಂಗಾಸಪತ್ನಿ ಶಿವ
ಲಿಂಗ ಪೀಠಿನಿ ದೈತ್ಯಭಂಗಿ ಭವರೋಗಘ್ನಿ ಜಂಗಮಸ್ಥಾವರಿ ಸತೀ ॥
ಮಾಂಗಲ್ಯಮೂರ್ತಿ ನಿಃಸ್ಸಂಗಿ ನಿಗಮಾಂತನುತೆ
ತುಂಗ ಕನಕಾಂಡಜನಿರಂಗಿ ಸೇವಕಜನಾ
ಪಾಂಗಿ ಸಹ್ಯಾದ್ರಿ ಕೆಳದಿಂಗಿ ನಾನಾತಂತ್ರವಂಗಿ ಜಯಭದ್ರಕಾಳೀ ॥ ೧೦೨ ॥

ಅಂಬಿಕೆ ಮಹೇಶ್ವರಿ ತ್ರ್ಯಂಬಕಿ ಮಯೂರವಾ
ಹಾಂಬೆ ಸರ್ವಾಜಾಂಡ ತುಂಬೆ ವೇದಾಂತವ
ಲಂಬೆ ನಾನಾರೂಪಬಿಂಬೆ ಮಾರೀಗಣಾಡಂಬರೆ ಜಗತ್ಪ್ರಸೂತೀ ||
ಬಿಂಬೋಷ್ಠಿ ಕರುಣಾಕದಂಬೆ ದಿವ್ಯಾಂಗಿ ಹೇ
ರಂಬ ಜನಯಿತ್ರಿ ನುತನಿಂಬೆ ಸೇವಕಜನ ಚಿ
ದಂಬರೆ ಸದಾಪೂರೆ ಶಂಬರಾಂತಕವರದೆ ಜೃಂಬೆ ಜಯಭದ್ರಕಾಳೀ || ೧೦೩ ||

ಸ್ವರ್ಣಮಣಿತಾಟಂಕೆ ವರ್ಣನೀಯ ಚರಿತ್ರೆ
ಕರ್ಣಾವತಂಸಕುವೆ ನಿರ್ಣೀತವೇದಾಂತೆ
ಜೀರ್ಣದಾನವಗರ್ವೆ ಚೂರ್ಣಕಾಲ ವಿಲಾಸೆ ದುರ್ಣೀತ ಜನ ಘಾತಿನೀ ||
ಆರ್ಣೋಂಗನಾನುಜೆಯಪರ್ಣೆ ಪಾರ್ವತಿಯನ್ನ
ಪೂರ್ಣೆ ಸೇವಕ ಕೃಪಾಮೃತಾರ್ಣವೆ ಚಿದಾನಂದ
ತೂರ್ಣೆ ಸರ್ವಾಜಾಂಡಘೂರ್ಣೆ ಕೆಳದೀಪುರಾಕೀರ್ಣೆ
ಜಯಭದ್ರಕಾಳೀ || ೧೦೪ ||

ವಾಣಿನುತೆ ಕಾಳಾಹಿವೇಣಿ ದಾನವರಣಧು
ರೀಣೆ ಕನಕಾಂಡ ಸಂತ್ರಾಣೆ ಪರಮೇಶ್ವರ
ಪ್ರಾಣೆ ಸುರಗಿರಿಚಾಪೆ ತೂಣೀರ ವಾರಾಸಿ ಬಾಣೀಕೃತಶ್ರೀಪತೀ ||
ಹೂಣೀರಘಾತಿನಿ ಸುಖಾಣಿ ಶಿವರೂಪೆ ರು
ದ್ರಾಣಿ ಮಾಯಾಂಗಿ ಶರ್ವಾಣಿ ಸರ್ವಾತ್ಮಕ
ಲ್ಯಾಣಿ ಕೆಳದೀಜನಸಭಾಣಿ ಮಂಗಲಗೌರಿ ರಾಣಿ ಜಯಭದ್ರಕಾಳೀ ||೧೦೫||

ತೋಯಜಾನನೆ ಮಹಾಮಾಯೆ ಸರ್ವಾಮರ
ಧ್ಯೇಯೆ ಚಿದ್ಬ್ರಹ್ಮಾಂಡಕಾಯೆ ಸಕಲಾಜಾಂಡ
ತಾಯೆ ಸಂಸ್ತುತ ಸದಾಮ್ನಾಯೆ ಸಚರಾಚರ ನಿಕಾಯೆ ಕಾರುಣ್ಯಾತ್ಮಕೀ ||
ಆಯಾಸದೂರೆ ಮಹಿಮಾಯತ್ತೆ ಭಕ್ತಫಲ
ದಾಯೆ ಪಾತಕಜನಾಪಾಯೆ ಮಾರೀಗಣಸ
ಹಾಯೆ ರಾಕ್ಷಸರಣಾಜೇಯೆ ಕೆಳದೀಮಾನವಾಯೆ ಜಯಭದ್ರಕಾಳೀ ||೧೦೬||

ಕಟಕತಾಟಂಕ ಸುಮಕುಟ ಮುಖ್ಯಭೂಷಣಾ
ಘಟಿತ ಕೋಮಲಗಾತ್ರೆ ಕುಟಿಲಕುಂತಳೆ ರಣಾ
ರ್ಭಟೆ ಭಕ್ತ ವರದಾನ ವಿಟಪಿನಿ ವಿಲಾಸಿನೀ ಸ್ಫುಟವಿನೋದನಶೀಲಿನೀ ||

ಅಟಿತಪಾಪವ್ರಾತೆ ವಟಮೂಲೆ ಸಿಂಹೀಶ
ಕಟಿ ಕನಕಗಿರಿಚಾಪೆ ನಿಟಲಾಕ್ಷಿ ಜನನ ಲಂ
ಪಟೆ ನಿರ್ಮಿತಾಜಾಂಡಪಟಲೆ ಕೆಳದೀಪುರೋದ್ಭಟವಾಕ್ಯೆ ಭದ್ರಕಾಳೀ ||೧೦೭||

ನಾರಾಯಣಾನುಜಾಯ್ಕೆ ಮಹಾದೇವ್ಯೈತೆ
ಮಾರಜನಯಿತ್ರ್ಯೈತೆ ಗಣಾಂಬಿಕಾಯ್ಕೆ ಸರ್ವ
ಕಾರಣಾಯ್ಕೆ ಸರ್ವಮಂಗಲಾಯ್ಕೆ ದೇವದಾನವಾಹವ ಮುದಾಯ್ಕೆ ||
ವೀರಭದ್ರ್ಯೈತೆ ವಿರೂಪಾಕ್ಷ್ಯೈ ಸಮಸ್ತಾಂಡ
ಕಾರಕಾಯ್ಕೆ ಸಕಲ ನಿಷ್ಕಲ ಶರೀರ ಸಂ
ಧಾರಣಾಯ್ಕೆ ಸಹ್ಯ ಕೆಳದೀಪುರಾವಾಸಿ ಭದ್ರಕಾಳ್ಯೈತೆ ನಮೋಸ್ತು ||೧೦೮||

ವಿಜ್ಞಾನಕೌಮುದಿ ವಿವೇಕಿಹೃದಯಾವಾಸೆ
ಸುಜ್ಞಾನದೀಪಿಕೆ ಸುರಾಸುರಾರ್ಚಿತಪದ ಪ
ರಿಜ್ಞಾತ್ರಿ ಸಂಸಾರಕಾರಕಿ ಕಲಾವತಿ ಕಪಾಲಿನಿ ಕರಾಳಿ ಕಂಕೀ ||
ಅಜ್ಞಾನತಿಮಿರ[ಮಾ][10]ರ್ತಾಂಡಿ ಮಾಯಾವರಣ
ವಿಜ್ಞೇಯೆ ವಿಶ್ವತೋಮುಖಿ ವಿರೂಪಾಕ್ಷಿ ಸ
ಮಜ್ಞಪ್ತಿ ಸಹ್ಯಾದ್ರಿ ಕೆಳದೀಪುರಾವಾಸೆ ಜಯಭದ್ರಕಾಳಿ ಕಾಳೀ ||೧೦೯||

ಸದ್ವಿಪೇಕಾಲಾಪೆ ಚಿದ್ವಿಲಾಸಿನಿ ಭೂಮಿ
ಯದ್ವಂದ್ಯಮಾನ ಸಂಪದ್ವಿಡಾಯಿನಿ ನತಾ
ಪದ್ವಿನಾಶಿನಿ ಭಕ್ತಹೃದ್ವಾಸೆ ಕುಶಲರಾಜದ್ವಿಭೂತಿವಿಭೂಷಣೇ ||
ಉದ್ವಾಸನಾಂಗಿ ಭಾಸ್ವದ್ವಾಣಿ ಶಿವಮಯಿ ಕ
ನಧ್ವರದೆ ಕಾಮೇಶ್ವರಿ ದ್ವಂದ್ವ ಕರ್ಮಣಿ ಜ
ಗದ್ವಂದೆ ಕೆಳದೀಪುರಾದ್ವಯಾಶಯೆ ಶರಣು ಮದ್ವಿಭವೆ ಭದ್ರಕಾಳೀ ||೧೧೦||

ಕಾಲಾಹಿವೇಣಿ ಸುರಮಾಲಾರ್ಚಿತಾಂಘ್ರಿ ಕಂ
ಕಾಲಕರೆ ದೈತೇಯಕಾಲನಾಶಿನಿ ಜಗ
ಜ್ಜಾಲನಿರ್ಮಾಣೆ ರಣದೂಲೆ ಸೇವಕಜನ ಮನೋಲಯೆಮಹಂತಿ ಶಾಂತೀ ||
ಬಾಲೇಂದು ನಿಟಿಲೆ ಮಂತ್ರಾಲಯೆ ವಿರೂಪಾಕ್ಷಿ
ನೀಲಕಂಠೀಶ್ವರಿ ನಿರಾಲೆ ನಿತ್ಯಾನಂದೆ
ಕಾಲಕೂಟಗ್ರಾಸೆ ಮಾಲತೀ ಕುಸುಮಮುಡಿ ಕಾಲಿಕಾದೇವಿ ಶರಣೂ ||೧೧೧||

---

10 'ಮ' ಎಂದಿದೆ

ಹರಿಸಹೋದರಿ ಶಂಭುವಾಮಾಂಕದಿವ್ಯ ವಿ
ಷ್ಟರೆ ಮಹಾಶ್ವೇತಾರ್ಕ ಕುಸುಮ ಮಂದಿರ ನಿಚಿತೆ
ಹರಿಣಾಕ್ಷಿ ನಿತ್ಯಪಾತಿವ್ರತ್ಯಶೀಲೆ ದೇವಾಸುರಾಹವವಿಲಾಸೇ ||
ಶರಣ ಸಂಜೀವನೆ ದಯಾಮೃತಾಕೂಪಾರೆ
ನಿರುಪಮೆ ನಿರಾತಂಕೆ ನಿಶ್ಚಿಂತೆ ನಿಃಕಾಯೆ
ಪರಮ ಸಹ್ಯಾದ್ರಿಕಿಳದೀನಗರಪಾಲಿನೀ ಶರಣಾರ್ಥಿ ಭದ್ರಕಾಳೀ || ೧೧೨ ||

ಶ್ವೇತಾರ್ಕ ಕುಸುಮಮಂದಿರ ವಿನೋದಿನಿಲ[ಯೆ]
ಶ್ವೇತಕೇತು ಪ್ರಭೃತಿ ಮುನಿಸುತಿಸ್ವಾಂತೆ ಜಯ
ನೂತನ ಶರೀರಧಾರಣ ವಿಲಾಸಿನಿ ಜಯ ಪ್ರಕ್ರಿಯಾರೂಪಿಣಿ ಜಯಾ ||
ಪಾತಕಾಸುರಯುದ್ಧ ಸನ್ನದ್ಧಮೂರ್ತಿ ಜಯ
ಪೂತಭಕ್ತಾಶಯಾಂಬುಜ ಸದಾವಾಸೆ ಜಯ
ಭೂತಳಾಧಿಕ ಸಹ್ಯ ಕಿಳದೀವಿಹಾರೆ ಜಯಭದ್ರಕಾಳೀಶ್ವರೀ ಜಯಾ ||೧೧೩||

ಏಕಾಂಗಿನೀಶ್ವರಿ ಭವಾನಿ ಮೃತ್ಯುಂಜಯೆ ಪಿ
ನಾಕಿನಿ ಶರಣ್ಯೆ ಶರಣಾರ್ತಿಭಂಜನಿ ದುರ್ಗಿ
ಮೂಕವೈರಿಣಿ ಖುಲ್ಲಹಂತ್ರಿ ಕುಂಡಲಿನಿ ಕೌಶಿಕಿ ಕಾಳರಾತ್ರಿ ಗಿರಿಜೇ ||
ಲೋಕಾಕ್ಷಿ ಗೋವಿಂದಭಗಿನಿ ಭಗವತಿ ಭರ್ಗೆ
ಕಾಕಘ್ನಿ ಕಾಮಿನಿ ಕಲಾವತಿ ಕರಾಳಿ ಸು
ಶ್ಲೋಕೆ ಸಹ್ಯಾದ್ರಿ ಕಿಳದೀನಗರ ಪಾಲಿನೀ ಜಯಭದ್ರಕಾಳಿ ಕಾಳೀ ||೧೧೪||

ಜೋತಿರ್ಮಯಾಂಗಿ ನಿರ್ಧೂತ ರಾಕ್ಷಸ ಕದನೆ
ಪಾತಿವ್ರತಾವಾಸೆ ವೀರೆ ದಿವ್ಯಾಭರಣೆ
ಪಾತಕವಿದೂರೆ ಮುನಿಚೇತೋಬ್ಜ ಸಂಚಾರೆ ನಿತ್ಯಕಲ್ಯಾಣದೇಹೇ ||
ಭೂತಿ ಭೂಷಣೆ ಶಿವೋಪೇತೆ ಕನಕಾಂಡ ರ
ಕ್ಷಾತಿಶಯೆ ಸೇವಕವ್ರಾತ ಫಲದಾಯಿನಿ ಸು
ಪೂತೆ ಸಹ್ಯಾದ್ರಿ ಕಿಳದೀತಳತ್ರಾಣೆ ಜಯಜಯ ಭದ್ರಕಾಳಿ ಕಾಳೀ || ೧೧೫ ||

ಪರಾಶಕ್ತಿ ಪರಮೇಶಿ ಪಾರ್ವತಿ ಪರಂಜ್ಯೋತಿ
ನಿರವಧಿ ನಿರಂಜನೆ ನಿರಾಭಾರಿ ನಿರ್ಲ್ಲಜ್ಜೆ
ನಿರುಪಮೆ ನಿರಾಳೆನಿರ್ಮಾಯೆ ನಿರ್ಮ್ಮಳೆ ನಿರಾತಂಕೆ ನಿಷ್ಕಳೆ ನಿರೂಹೇ ||
ಧರತನಯೆ ಧರಣಿಧರ ಹಸನೆ ಧರಣೇಂದ್ರಸುತೆ
ಕರಿಣಿ ಕರವೀರನುತೆ ಕರಟವಾದನಮೋದೆ
ಶರಣಕಾಮಿತದಾತ್ರಿ ಸಹ್ಯಕಿಳದೀ ಭದ್ರಕಾಳಿ ಚನ್ನಾಜಿ ಕಾಳೀ || ೧೧೬ ||

ಸರ್ವಜಗದಂಬಿಕೇ ಸನಕಾದಿ ಮುನಿವರದೆ
ಗೀರ್ವಾಣನುತಪಾದೆ ಗೀಷ್ಪತಿಸ್ತುತಮೋದೆ
ಪರ್ವತೇಶ್ವರ ತನಯೆ ಪಾರ್ವಣಾಶಯ ವಿನಯೆ ಶಂಕರಾರ್ಧಾಂಗಾಲಯೆ ||
ನಿರ್ವಿಘ್ನಕಾರಿಣೀ ನಿಖಿಲಂಜನರೂಪಿಣೀ
ಗರ್ವಾಸುರಾಂತಕೀ ಗಮನವಿಶ್ರಾಂತಕೀ
ಸರ್ವಜ್ಞೆ ಸಕಳೆ ಸಹ್ಯಾದ್ರಿ ಕೆಳದೀನಗರವಾಸೆ ಜಯಭದ್ರಕಾಳೀ || ೧೧೭ ||

ಶೃಂಗಾರರೂಪಿಣಿ ಮತಂಗಾವತಾರೆ ರಣ
ರಂಗ ಲೀಲಾಸ್ಪದೆ ಕುರಂಗಾಕ್ಷಿ ಭಕ್ತಾಂತ
ರಂಗ ಪರಮೇಶವಾಮಾಂಗಮಂದಿರೆ ಸರ್ವಮಂಗಲೆ ಮಹೇಶ್ವರಿ ಶಿವೇ ||
ಗಂಗಾಸಪತ್ನಿ ಭವಭಂಗೆ ಮಂಗಳಚಿತ್ತೆ
ತುಂಗ ಸಿಂಹಾರೂಢೆ ಜಂಗಮಾಂಬಕಿ ಮಹಾ
ಲಿಂಗಿ ಕೆಳದೀನಗರಸಂಗಿ ಸೇವಕಕೃಪಾಂಗಿ ಜಯಭದ್ರಕಾಳೀ || ೧೧೮ ||

ವಿಶ್ವೇಶ್ವರಾರ್ಧಾಂಗಿ ವಿಕಟನಟನಾಪಾಂಗಿ
ಶಶ್ವದ ಖಿಲಾಂಡ ಚರಿ ಶರಣ ಹೃದಯಾಬ್ಜಪುರಿ
ಪಶ್ವೀಶವರಧಾತ್ರಿ ಪರಮಮಂಗಲಗಾತ್ರಿ ಪರಿಪಂಥಿ ಕಲಹಪ್ರಿಯೇ ||
ಅಶ್ವಲಾಯನ ವಿನುತೆ ಯಾದಿ ಮಧ್ಯಾಂತತತೆ
ನಶ್ವರೀಕೃತಲೋಕೆ ನಾಕೇಶ್ವರಾಲೋಕೆ
ಯಾಶ್ವನೇಯಾಪಾಧ್ಯೆ ಯಾಮಳಾರ್ಚಕ ಜೋದ್ಯೆ ರಕ್ಷಿಸಾ
ಕೆಳದೀಶ್ವರೀ || ೧೧೯ ||

[೧೨ಂನೇ ಸಂಧಿ (ಉತ್ತರ ಕಾಂಡದ ೫ನೇ ಸಂಧಿ)ಯ ಗಂಗಳು ಹಾಳಾಗಿವೆ]

ಜಯದೇವತಾರಾಧ್ಯೆ ಜಯದಾನವಾಸಾಧ್ಯೆ
ಜಯಸರ್ವಜೀವದಯೆ ಜಯನಿರ್ವಿಕಾರಚಯೆ
ಜಯಮಂಗಲಶರೀರೆ ಜಯಲಿಂಗಪೀಠಾರೆ ಜಯತಾಯಿ ಜಯ ಚಿರಾಯಿ ||
ಜಯ ವಿಧೃತ ಕನಕಾಂಡೆ ಜಯವಿಹೃತ ರಣಶೌಂಡೆ
ಜಯಚರಾಚರಮೂರ್ತಿ ಜಯಚಿರಂತನ ಕೀರ್ತಿ
ಜಯಸಹ್ಯ ಕೆಳದೀಶಿಬಾಹ್ಯಗುಣನಾಶೀಜಯಭದ್ರೇ
ಜಯಸಾಮುದ್ರೇ || ೧೨೧ ||

ಮೈನಾಕಭಗಿನಿ ಲಕ್ಷ್ಮೀನಾಥ ಸೋದರಿ ಶ
ತಾನಂದ ಜನನಿ ಶಶಿಭಾನುಶುಚಿನಯನೆ ವ[ರ]
ಸೇನಾಧಿಪತಿ ನರ್ತನಾನಂದೆ ಭಕ್ತಸಂತಾನೆ ಪರಮೇಶ್ವರಿ ಶಿವೇ ||
ಕಾನನ ಶ್ರೀನುತೆ ಮಹಾನುಭಾಮಿನಿ ನಿತ್ಯ
ಭಾನೆ ಷಟ್ತ್ರಿಂಶತತ್ವಾನುರೂಪಿಣಿ ಸಾಮ
ಗಾನಮುದೆ ಕೆಳದೀಪುರೀನೆ ಪರ್ವತರಾಜಸೂನು ಜಯಭದ್ರಕಾಳೀ || ೧೨ ||

ನುತಕಾಯೆ ಜಿತಮಾಯೆ ಪುರಮಥನೆ ವರಕಥನೆ
ಧೃತಸೋಮೆ ಗತಕಾಮೆ ಕಮಲಮುಖಿ ವಿಮಲಸಖಿ
ಗತಮೂಕೆ ಚಿತಲೋಕೆ ಪರಮೇಶಿ ಚಿರಕಾಶಿ ಭವಭಂಗಿ ನಿರ್ಮಲಾಂಗೀ ||
ದಿತರಾಗೆ ತತಯೋಗೆ ರಮಣೀಯೆ ಕಮನೀಯೆ
ವೃತವರಣೆ ಭೃತಭರಣೆ ಶಿವರೂಪೆ ರವಿದೀಪೆ
ಹೃತಕರಣೆ ಮತಶರಣೆ ಸವ್ಯೂಹೆ ಭವ್ಯೇಹೆ ಕೆಳದೀಶಿ ಖಳವಿನಾಶಿ || ೧೩ ||

ಆಹವವಿನೋದಿನಿ ಜನಾಹಾರದಾಯಿನಿ ಸು
ದಾಹಂಸಿ ದೇವತಾವ್ಯೂಹೆ ಪರಮಾನಂದ
ಗೇಹೆ ನಾನಾಶಸ್ತ್ರಸಾಹಸ್ರದೋರ್ದ್ದಂಡೆ ಮಾಹೇಶ್ವರೀ ಪ್ರೇರಕೀ ||
ಬಾಹುಲೇಯಾನಂದೆ ಸಾಹಸಗುಣಾವಾಸೆ
ಮೋಹಿನೀ ಪುರಂಟೀಮುದೋಹೆ ಮಾಯಾಜಾಲ
ಬಾಹೆ ನತಭವವಿಪಿನದಾಹೆ ಕೆಳದೀಪತ್ತನೇಹೆ ಜಯಭದ್ರಕಾಳೀ || ೧೪ ||

ತ್ರಿಪುರಾಂತಕೇಶ್ವರಾರ್ಧಾಂಗಿ ಶಾಂಭವಿ ಮಹಾ
ತಪೆ ಭಕ್ತವತ್ಸಲೆ ಸಮಸ್ತ ಜೀವಾಧಾರೆ
ವಿಪರೀತವೇಷಧಾರಿಣಿ ವಿಚಿತ್ರ ಚರಿತ್ರೆ ವಿಶ್ವನಾಥಿ ವಿರೂಹಿಣೀ ||
ತಪನಶಶಿವಹ್ನಿಮಂಡಲ ಮಧ್ಯವಾಸಿನೀ
ವ್ಯಪಗತಾಸುರ ರಣೆ ನಿರಂಜನೆ ನಿರಾತಂಕೆ
ಜಪ ಹೋಮ ತರ್ಪಣ ಫಲಪ್ರದಾಯಿನಿ ಸಹ್ಯ ಕೆಳದೀಶಿಕಾಳಿ
ಶರಣೂ || ೧೫ ||

[೧೬ನೇ ಸಂಧಿಯಿಂದ ಪ್ರಾರ್ಥನಾ ಪದ್ಯಗಳಿರುವುದಿಲ್ಲ.]

## ಪರಿಷತ್ಪತ್ರಿಕೆ ಲೇಖಕರ ವಿಳಾಸ


೧ ಡಾ|| ಬಿ. ಆರ್. ಹಿರೇಮಠ
ಅಧ್ಯಾಪಕರು, ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ-೫೮೦ ೦೦೩

೨ ಡಾ|| ಎಚ್. ಎಂ. ಮಹೇಶ್ವರಯ್ಯ
ಅಧ್ಯಾಪಕರು, ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ-೫೮೦ ೦೦೩

೩ ಹಂಪ. ನಾಗರಾಜಯ್ಯ
೧೦೭೯ 'ಸ್ವನಿಮಾ', ೫ನೆಯ ಬಡಾವಣೆ
ರಾಜಾಜಿನಗರ, ಬೆಂಗಳೂರು-೫೬೦ ೦೧೦

೪ ಡಾ|| ಬಿ. ವ್ಹಿ. ಶಿರೂರ
ಎಸ್. ವಿ. ಕಾಲೇಜು
ನರೇಗಲ್ಲು, ಜಿಲ್ಲೆ ಧಾರವಾಡ-೫೮೨ ೧೦೯

೫ ಡಾ|| ಕೆ. ಶ್ರೀಕಂಠಯ್ಯ
೩೯೩, ಜಯನಗರ, ೧ನೆಯ ಬಡಾವಣೆ
ಬೆಂಗಳೂರು-೫೬೦ ೦೧೧

೬ ಮಾಧವ ನಾ. ಕಟ್ಟಿ
ಮುಖ್ಯ ಶಾಸನತಜ್ಞರು
ವಿಶ್ವವಿದ್ಯಾನಿಲಯದ ಹಳೆಯ ಕಚೇರಿ ಕಟ್ಟಡ
ಮೈಸೂರು-೫೭೦ ೦೦೫

೭ ಡಾ|| ಕೆ. ಕೃಷ್ಣಮೂರ್ತಿ
'ದತ್ತನಿವಾಸ', ಸಪ್ತಾಪುರ
ಧಾರವಾಡ-೫೮೦ ೦೦೧

೮ ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ
' ಬ್ರಾಹ್ಮೀ ', ೭೮ 'ಬಿ'
ಆಶ್ರಮದ ರಸ್ತೆ, ೩ನೆಯ ವಿಭಾಗ
ಜಯಲಕ್ಷ್ಮೀಪುರಂ, ಮೈಸೂರು-೫೭೦ ೦೦೨

೯ ದೇವರ ಕೊಂಡಾರೆಡ್ಡಿ
೫೩, ೨ನೆಯ ಮುಖ್ಯರಸ್ತೆ
ಲಕ್ಕಸಂದ್ರ, ಬೆಂಗಳೂರು-೫೬೦ ೦೩೦

೧೦ ಬಿ. ರಾಜಶೇಖರಪ್ಪ
ಕನ್ನಡ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಹೊಸದುರ್ಗ ೫೭೭ ೫೨೭

[ರಕ್ಷಾಪತ್ರದ ೨ನೇ ಪುಟದಿಂದ ಮುಂದುವರಿದುದು]

(೨೫) ದೀರ್ಘಾಯು, ಬೆಂಗಳೂರು (೨೬) ಗ್ರಂಥಲೋಕ, ಮೈಸೂರು ೨೭) ಸಪ್ತಗಿರಿ, ತಿರುಪತಿ (೨೮) ರೂಪತಾರಾ, ಮಣಿಪಾಲ (೨೯) ಮಲ್ಲಿಗೆ, ಬೆಂಗಳೂರು (೩೦) ಸನ್ಮತಿ, ಕೊಲ್ಹಾಪುರ (೩೧) ಕಲಾಪ್ರಪಂಚ, ಗದಗ (೩೨) ವಾಲ್ಮೀಕಿ ಸಂದೇಶ, ಗದಗ (೩೩) ಸಿದ್ಧಗಂಗಾ, ತುಮಕೂರು (೩೪) ಲಿಂಗವಂತ, ಗದಗ (೩೫) ಕಲ್ಯಾಣಕಿರಣ, ಬೆಂಗಳೂರು (೩೬) ಅನ್ವೇಷಣೆ, ಬೆಂಗಳೂರು (೩೭) ವೈದ್ಯತರಂಗಿಣಿ, ಮೈಸೂರು (೩೮) ಶಿಕ್ಷಣ ಸಮಾಚಾರ, ಬೆಳಗಾವಿ (೩೯) ಜ್ಞಾಪನಾ, ಬೆಂಗಳೂರು (೪೦) ಪೆನ್ಮನರ್, ಬೆಂಗಳೂರು (೪೧) ವೈದ್ಯಹೃದಯ, ಬೆಂಗಳೂರು (೪೨) ಜನಪ್ರಿಯವಿಜ್ಞಾನ, ಬೆಂಗಳೂರು (೪೩) ಕೃಷಿ ವಾರ್ತೆ, ಬೆಂಗಳೂರು (೪೪) ಉತ್ಥಾನ, ಬೆಂಗಳೂರು

ದ್ವೈಮಾಸಿಕ: (೧) ಬಸವಪಥ, ಬೆಂಗಳೂರು (೨) ಜಾನಪದಜಗತ್ತು, ಬೆಂಗಳೂರು

ತ್ರೈಮಾಸಿಕ: (೧) ಕರ್ನಾಟಕಭಾರತಿ, ಧಾರವಾಡ (೨) ಕರ್ನಾಟಕಗ್ರಂಥಾಲಯ, ಧಾರವಾಡ (೩) ಸಂಕ್ರಮಣ, ಧಾರವಾಡ (೪) ಪ್ರಬುದ್ಧಕರ್ಣಾಟಕ, ಮೈಸೂರು (೫) ಮಾನವಿಕಕರ್ಣಾಟಕ, ಮೈಸೂರು (೬) ಜ್ಞಾನಸುಧಾ, ಬೆಂಗಳೂರು (೭) ಸಾಧನೆ, ಬೆಂಗಳೂರು (೮) ಆಹಾರವಿಜ್ಞಾನ, ಬೆಂಗಳೂರು (೯) ಮೈಸೂರುಸಕ್ಕರೆ, ಮಂಡ್ಯ (೧೦) ತರಳಬಾಳು, ಸಿರಿಗೆರೆ (೧೧) ಪ್ರಕೃತಿಜೀವನ, ಬೆಂಗಳೂರು (೧೨) ಯುಗರಶ್ಮಿ, ಮಂಗಳೂರು.

**Fortnightly:** (1) Indian Libertarian, Bangalore (2) News from Isreil, Bombay.

**Monthly:** (1) Culture & Life, U.S.S.R. (2) Dasajyothi, Bangalore (3) Soviet Literature, U. S. S. R. (4) Public Affairs, Bangalore (5) Indian P.E.N., Bombay (6) Soviet Land, New Delhi (7) The Sahitya Academy ofLetters, New Delhi (8) The American Reporter, New Delhi (9) Karnataka Heritage, Bangalore.

**Bi-Monthly:** (1) The Journal of the University of Bombay.

**Quarterly:** (1) Journal of the Mythic Society, Bangalore (2) Bulletin of the Deccan College Research Institute, Poona (3) Journal of the Shivaji University, Kolhapur.

**Half-Yearly:** (1) Half-Yearly Journal of the Mysore University.

B. M. S. Press, Kannada Sahitya Parishat, Bangalore-560018

# ೧೯೮೪ರ ಪ್ರಕಟಣೆಗಳು

## 'ಬೆಳ್ಳಿ ಬಿಟ್ಟ ಬಳ್ಳಿ' ಮಾಲೆ

| | |
|---|---|
| ಶಿರಸಿ ಸಾಹಿತ್ಯ ಸಮ್ಮೇಳನ—ವಿವಿಧ ಲೇಖಕರು | ರೂ. ೩೦-೦೦ |
| ೧೯ನೇ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ —ಎ. ಎಸ್. ಜಯರಾಂ | ೮-೦೦ |
| ಸಂಪ್ರದಾಯದ ಗೀತೆಗಳು—ಬಿ. ಎಸ್. ಸರೋಜ | ೫-೦೦ |
| ಹನೂಮಾನ್ ವೆಂಕಟರಾಯರು—ಕ.ರಾ. ಲಕ್ಷ್ಮೀಕಾಂತಯ್ಯ | ೨-೫೦ |
| ಸಂಶೋಧನೆ—ಡಾ\|\| ಎಂ. ಚಿದಾನಂದಮೂರ್ತಿ | ೫-೦೦ |
| ಕುಸ್ತೀಕಂಠೀರವ—ಭಾರತೀಪುತ್ರ | ೫-೦೦ |

## ಗದ್ಯಾನುವಾದ

| | |
|---|---|
| ಮೋಹನ ತರಂಗಿಣಿ—(ಅನು.) ಡಾ\|\| ಎಸ್. ಎಸ್. ಕೋತಿನ | ೩೫-೦೦ |

## ಮರುಮುದ್ರಣ

| | |
|---|---|
| ಗಮಕ ಕಲೆ—ವಿವಿಧ ಲೇಖಕರು | ೮-೦೦ |
| ಕನ್ನಡ ನಾಡಿನ ಚರಿತ್ರೆ ಭಾಗ-೨—ಡಾ\|\| ಎಸ್.ಸಿ. ನಂದೀಮಠ | ೧೦-೦೦ |
| ಆರೋಗ್ಯ ಮತ್ತು ಇತರ ಪ್ರಬಂಧಗಳು—ಡಾ\|\| ಪಿ.ಎಸ್. ಶಂಕರ್ | ೫-೦೦ |
| ಅತ್ಯುತ್ತಮ ಸಣ್ಣ ಕತೆಗಳು—ವಿವಿಧ ಲೇಖಕರು | ೫-೦೦ |
| ಹಾಸ್ಯ ಲೇಖನಗಳು—ವಿವಿಧ ಲೇಖಕರು | ೮-೦೦ |
| ಕನ್ನಡದ ಬಾವುಟ—(ಸಂ.) 'ಶ್ರೀ' | ೮-೦೦ |



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ ಚಾಮರಾಜಪೇಟೆ
ಬೆಂಗಳೂರು ೫೬೦ ೦೧೮